## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

1065 ಶ್ರೀ ಕೆ. ಆರ್. ಮರಿಯಪ್ಪ S/o ಡಿ. ರಾಮಯ್ಯ, ಕಾಮಲು ಶಿವಗಂಗಾ, ನೆಲಮಂಗಲ ತಾಲ್ಲೂಕ್, ಬೆಂಗಳೂರು ಜಿಲ್ಲೆ.

1066 ಶ್ರೀ ಎಸ್. ಕೆ. ಮುದ್ದಯ್ಯ S/o ಕೆಂಪಯ್ಯ, ದೊಡ್ಡಸಗ್ಗೆರೆ, ಕೊರಟಗೆರೆ ತಾಲ್ಲೂಕ್, ತುಮಕೂರು ಜಿಲ್ಲೆ.

1067 ಶ್ರೀ ಜಿ ನಂಜಪ್ಪ, ಗಾಣಿಗರ ಪಾಳ್ಯ, ತಲಗಹಳ್ಳಿ ಪುರ, ಬೆಂಗಳೂರು ದಕ್ಷಿಣ-560062.

1068 ಶ್ರೀ ಬಿ ಶಾಸ್ತ್ರಿ, ಪ್ರೋರ್ಟೆ, ತಿಪಟೂರು, ತುಮಕೂರು ಜಿಲ್ಲೆ.

1069 ಶ್ರೀ ಲೋಕೇಶ್, ಗಾಯತ್ರಿ ಸಿಲ್ಕ್ ಹೌಸ್, ತಿಪಟೂರು, ತುಮಕೂರು ಜಿಲ್ಲೆ.

1070 ಶ್ರೀ ಜಿ. ಕರಿಸಿದ್ದಯ್ಯ ಸ್ಟೇರ್ಷ ರೋಡ್, ತಿಪಟೂರು, ತುಮಕೂರು ಜಿಲ್ಲೆ.

1071 ಶ್ರೀ ಗದಿಗಪ್ಪ, ಡ್ರೈವರ್, ಉಗರಗಲ್ ಪೋಸ್ಟ್, ಸವದತ್ತಿ ತಾಲ್ಲೂಕ್, ಬೆಳಗಾಂ ಜಿಲ್ಲೆ.

1072 ಶ್ರೀಮತಿ ದೇವಮ್ಮ, ಬಸವರಾಜ ಕುಮಾರ್, ನಿವೃತ್ತ ಶಿಕ್ಷಕರು, ತಿಗಡಿಗಲ್ಲ, ಬೈಲಹೊಂಗಲ, ಬೆಳಗಾಂ ಜಿಲ್ಲೆ-591102.

1073 ಶ್ರೀ ಕೆ. ಬಿ. ಸತೀಷ್‌ಕುಮಾರ್ S/o ಬಿ. ಎನ್. ಬಸವರಾಜ್, ಕೋಲಗುಂದ, ಅರಸೀಕೆರೆ ತಾಲ್ಲೂಕ್, ಹಾಸನ ಜಿಲ್ಲೆ.

1074 ಶ್ರೀ ಜಿ. ಎಸ್. ಶಿವಣ್ಣ, ಜನರಲ್ ಮರ್ಚೆಂಟ್, ಯಲಚೇನಹಳ್ಳಿ, ಸಾರಕ್ಕಿ, ಬೆಂಗಳೂರು ದಕ್ಷಿಣ ಜಿಲ್ಲೆ.

1075 ಶ್ರೀ ಜಿ. ಎಸ್. ಗಂಗಾಧರ್, ಶಂಕರ್ ಪವರ್ ಲೂಮ್ಸ್, ದೊಡ್ಡ ಕಾಲಸಂದ್ರ, ಕನಕಪುರ ರಸ್ತೆ, ಬೆಂಗಳೂರು-62.

1076 ಶ್ರೀ ಶಿವಗಂಗಪ್ಪ, ನಂ. 51 ಮಹಡಿ, ಐದನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು-560027.

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೧೦ ಅಕ್ಟೋಬರ್, ೧೯೮೫

## ಶ್ರೀ ಸಿದ್ಧಗಂಗಾ ಗುರುಕರಣ ತ್ರಿವಿಧಿ

ಶರಣ ಪರಂಪರೆಯು ಶಿವಲಿಂಗ ಪುಷ್ಪವೇ
ಮನುಕುಲದ ಮಂಗಳದ ದೀವಿಗೆಯೋ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮಾತೆಲ್ಲ ಮಲ್ಲಿಗೆ ಮನವೆಲ್ಲ ಶ್ರೀಗಂಧ
ಕಾಯಕವೆ ನಿಜದ ಶಿವಯೋಗ।ವೆನಿಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಭಕ್ತಿಯಲಿ ಬಸವೇಶ ಜ್ಞಾನದಲಿ ಪ್ರಭುದೇವ
ಕರ್ಮದಲಿ ಸಿದ್ಧರಾಮನೆನಿಸಿದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ



# ಶ್ರೀವಾಣಿ

ಮನುಷ್ಯನಿಗೆ ಅನ್ನ ಜೀವನಾವಶ್ಯಕ ವಸ್ತುಗಳಲ್ಲಿ ಒಂದು. ಅದು ಚೈತನ್ಯಯುಕ್ತ, ಜೀವನಾಧಾರಕ, ಹಾಗೆ ಮಾನಸಿಕ ವಿಚಾರಗಳಿಗೆ ಪೋಷಕ, ಪರಿಪೂರ್ಣ ವ್ಯಕ್ತಿತ್ವಕ್ಕೆ ಸಾಧಕ. "ಕುಕ್ಷೌ ತಿಷ್ಠತಿ ಯಸ್ಯಾನ್ನಂ ತಸ್ಯ ಬುದ್ಧಿಃ ಪ್ರಜಾಯತೇ" ಎಂಬ ಸೂಕ್ತಿಯೊಂದುಂಟು. ಅನ್ನ ನೀಡುವವನ ಮನೋಧರ್ಮ ಊಟ ಮಾಡುವವನ ಮೇಲೆ ಪ್ರಭಾವ ಬೀರುತ್ತದೆ ಎಂದು. ಮಹಾಭಾರತದ ಪ್ರಸಂಗ ನೆನಪಿಗೆ ಬರುತ್ತದೆ. ಕುರುಕ್ಷೇತ್ರದ ಯುದ್ಧ ಮುಗಿದ ಮೇಲೆ ಧರ್ಮರಾಯನು ಪತ್ನಿ ತಮ್ಮಂದಿರೊಡನೆ ಪಿತಾಮಹನಾದ ಭೀಷ್ಮರ ಹತ್ತಿರ ಹೋದನು. ವಯೋವೃದ್ಧರೂ ಜ್ಞಾನವೃದ್ಧರೂ ಆದ ಭೀಷ್ಮರನ್ನು ಕುರಿತು "ಯುದ್ಧ ನಿಮಿತ್ತ ಮನಸ್ಸು ವ್ಯಾಕುಲಗೊಂಡಿದೆ. ಅಶಾಂತಿಗೊಳಗಾಗಿದೆ. ತಮ್ಮ ಧರ್ಮೋಪದೇಶದಿಂದ ನಮ್ಮನ್ನು ಪುನೀತರನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದನು." ಪಕ್ಕದಲ್ಲಿದ್ದ ದ್ರೌಪದಿ ನಕ್ಕುಬಿಟ್ಟಳು. ಧರ್ಮರಾಜ ನಕ್ಕ ಕಾರಣ ಕೇಳಿದ. ದ್ರೌಪದಿ "ತುಂಬಿದ ಸಭೆಯಲ್ಲಿ ದುಶ್ಯಾಸನ ನನ್ನ ಮಾನಭಂಗ ಮಾಡುತ್ತಿದ್ದಾಗ ವಿವೇಕ ಹೇಳಲು ಶಕ್ತರಲ್ಲದ ಇವರು ಇಂದು ಧರ್ಮೋಪದೇಶ ಮಾಡುತ್ತಾರೆಯೆ? ಇವರಿಗೆ ಉಪದೇಶ ಕೊಡುವ ಅಧಿಕಾರವಾದರೂ ಇದೆಯೆ? ಇವರೆಂಥ ಉಪದೇಶಕರು?" ಎಂದಳು. ಭೀಷ್ಮರು ಕೋಪಗೊಳ್ಳಲಿಲ್ಲ, "ಹೌದು ತಾಯಿ, ನೀನು ಕೇಳುತ್ತಿರುವುದು ಸತ್ಯ." ಅಂದು ನಿನ್ನನ್ನು ರಕ್ಷಿಸಲಾರದಷ್ಟು ನಿಶ್ಯಕ್ತನಾಗಿದ್ದೆ. ಕಾರಣವಿಷ್ಟೆ. ಅಂದು ನಾನು ತಿನ್ನುತ್ತಿದ್ದ ಆಹಾರ ದುರ್ಯೋಧನನದ್ದು. ದುರ್ಭಾವನೆಯೊಳಗಾಗಿತ್ತು. ಅಂದಿನ ಮನೋಧರ್ಮಕ್ಕನುಗುಣನಾಗಿ ವರ್ತನೆ ಮಾಡಬೇಕಾಯಿತು, ತಿಂದ ತುತ್ತು ಅನ್ನವೂ ದುರ್ಭಾವನೆಯುಳ್ಳದ್ದರಿಂದ ವಿವೇಕ ಶೂನ್ಯನಾಗಿ ಕುಳಿತುಕೊಳ್ಳಬೇಕಾಯಿತು. ಆದರೆ ಇಂದು ನಾನು ದುರ್ಯೋಧನನ ಹಂಗಿನಲ್ಲಿಲ್ಲ. ಸ್ವತಂತ್ರನಾಗಿದ್ದೇನೆ. ನನ್ನ ಮನೋಧರ್ಮಗಳೆಲ್ಲಾ ಉದಾತ್ತ ಚಿಂತನೆಯಲ್ಲಿವೆ. ಪ್ರಶಾಂತಚಿತ್ತನಾಗಿದ್ದೇನೆ. ಭಾವನೆ ಪರಿಶುದ್ಧವಾಗಿದೆ. ಉಪದೇಶ ಕೊಡುವ ಅಧಿಕಾರ, ಸ್ವಾತಂತ್ರ್ಯ ನನಗಿದೆ." ಎಂದು ಸೌಮ್ಯವಾಗಿ ಉತ್ತರಿಸಿದರು. ಆದ್ದರಿಂದ ನಾವು ನಿತ್ಯ ಸ್ವೀಕರಿಸುವ ಪ್ರಸಾದ ನಮ್ಮ ಗುಣಧರ್ಮದ ಮೇಲೆ ಪ್ರಭಾವ ಬೀರುವುದರಿಂದ, ಶುದ್ಧ ಕಾಯಕದಿಂದ ಸ್ವೀಕರಿಸಿದ ಪ್ರಸಾದ ಪರಿಣಾಮಕಾರಿಯಾದುದು. ಪರಿಪೂರ್ಣತ್ವಕ್ಕೆ ಸಾಧಕವಾದುದು.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
**ಪಂ|| ಚನ್ನಪ್ಪ ಎರೇಸೀಮೆ**
ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಪಿ. ಎಸ್. ಚಂದ್ರಶೇಖರಯ್ಯ**
**ಬಸವರಾಜು**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ಪ್ರಸಾರ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ**

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾ ಕ್ಷೇತ್ರ**

## ಚಂದಾ ವಿವರ

**ವಾರ್ಷಿಕ ಚಂದಾ 20-00 ರೂ**
**ಆಜೀವ ಸದಸ್ಯತ್ವ 201-00 ರೂ**


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ವಿನಮ್ರ ಪ್ರಾರ್ಥನೆ

ವೀರಶೈವ ಮಠಗಳಿಗೆ ತಮ್ಮದೇ ಆದ ಪರಂಪರೆಯಿದೆ, ಇತಿಹಾಸವಿದೆ. ಜನಪದ ಸಮಷ್ಟಿ ಜೀವನಕ್ಕೆ ತಮ್ಮನ್ನು ಅರ್ಪಿಸಿಕೊಂಡ ಅವುಗಳ ಸೇವಾ ಜೀವನ ಸ್ಮರಣೀಯ, ಅನುಕರಣೀಯ. ಕೇವಲ ಧಾರ್ಮಿಕ ತತ್ವಗಳನ್ನಷ್ಟೇ ಪ್ರಚಾರಮಾಡುವ ಮಣಿಹಕ್ಕೆ ಅವು ಸೀಮಿತಗೊಂಡಿಲ್ಲ. ಲೋಕಜೀವನದ ಪರಿಪೂರ್ಣತೆಗಾಗಿ ಶ್ರಮಿಸುತ್ತ ಬಂದಿವೆ. ಸಾಮಾಜಿಕ ರಂಗದಲ್ಲಿ ಮಹತ್ವದ ಪಾತ್ರವಾಡಿವೆ. ವೀರಶೈವ ಧರ್ಮದ ಉದಯವಾದದ್ದೇ ಜನಪದ ಸಮಷ್ಟಿ ಬದುಕಿನ ಅಭಿವೃದ್ಧಿಗಾಗಿ, ಅದಕ್ಕಾಗಿ ವ್ಯವಸ್ಥಿತ ಮಾರ್ಗವನ್ನು ಅನುಸರಿಸಿದವು. ಮಠಕ್ಕೆ ಬರುವ ಸ್ವಾಮಿಯ ಸಚ್ಚಾರಿತ್ರ್ಯ ಮುನ್ನೋಟ, ಮುಕ್ತ ಹೃದಯ, ಮುಕ್ತ ವಾತಾವರಣ ಸೃಷ್ಟಿಯಿಂದಾಗಿ ಮಠದ ಎತ್ತರ–ಬಿತ್ತರಗಳು ಕಾಣುವಂತಾಯಿತು. ಗಮನಾರ್ಹವಾದ ಮಾತೆಂದರೆ, ವೀರಶೈವ ಮಠಗಳು ನಮ್ಮ ಸಮಾಜವನ್ನು ಮೇಲೆತ್ತುವಂತೆಯೇ, ಅನ್ಯ ಸಮಾಜಗಳನ್ನೂ ಉದಾರವಾಗಿಯೇ ಕೈಹಿಡಿದು ನಡೆಸಿರುವ ಉದಾಹರಣೆಗಳು ಹೇರಳವಾಗಿವೆ. ಒಂದು ಅಂದಾಜಿನಂತೆ ಇಂದು ಕರ್ನಾಟಕದಲ್ಲಿ ಸುಮಾರು ನಾಲ್ಕು ಸಾವಿರ ವೀರಶೈವ ಮಠಗಳಿವೆ ಎಂದು ತಿಳಿದು ಬರುತ್ತದೆ. ಆ ಎಲ್ಲ ಮಠಗಳೂ ಒಂದಲ್ಲ ಒಂದು ವಿಧದಲ್ಲಿ ಲೋಕ ಜೀವನಕ್ಕೆ ತಮ್ಮನ್ನು ತೊಡಗಿಸಿಕೊಂಡಿವೆ. ಗುರು ಪರಂಪರೆಯ ಮಠ ವಿರಕ್ತ ಪರಂಪರೆಯಮಠ, ಶರಣಾರ್ಯ ಮಠ ಎಂಬುದಾಗಿ ಅವುಗಳ ಪ್ರಸಿದ್ಧಿ ಪ್ರಖ್ಯಾತಿಗಳಿದ್ದರೂ "ಯಥಾ ಗಚ್ಛತಿ ಸಾಗರಂ"–ಎಂಬಂತೆ ಉದ್ದೇಶ ಒಂದೇ ಆಗಿರುವುದು ವೇದ್ಯ.

ಕರ್ನಾಟಕದ ಶೈಕ್ಷಣಿಕ ನಕ್ಷೆಯಲ್ಲಿ ವೀರಶೈವ ಮಠಗಳದ್ದು ಸಿಂಹಪಾಲು. ವಿದ್ಯಾರ್ಥಿ ನಿಲಯಗಳ ಸ್ಥಾಪನೆ, ಅನ್ನದಾಸೋಹ, ಜ್ಞಾನದಾಸೋಹ, ಸಾಹಿತ್ಯ ದಾಸೋಹ, ಪತ್ರಿಕೋದ್ಯಮ, ಸಹಕಾರ ಸಂಘಗಳ ಸ್ಥಾಪನೆ, ಇತ್ಯಾದಿಯಾಗಿ ಅವುಗಳ ಕಾರ್ಯಕ್ಷೇತ್ರ ವ್ಯಾಪಕವಾದುದು. ರಾಷ್ಟ್ರಜೀವನದಲ್ಲಿ ಅವು ಗೈದಿರುವ ಸೇವೆ ಅಪಾರ. ಅವು ನೀಡಿರುವ ರಾಜಕಾರಣ ಪಟುಗಳು, ವಿಜ್ಞಾನಿಗಳು, ಸುಪ್ರಸಿದ್ಧ ಕಲಾವಿದರು, ಸಾಹಿತಿಗಳು, ಸಮಾಜಸುಧಾರಕರು, ವಿಜ್ಞಾನಿಗಳು, ದಕ್ಷ ಆಡಳಿತಗಾರರು ಗಣನೀಯ. ಕರ್ನಾಟಕದ ವಿವಿಧ ಭಾಗಗಳಲ್ಲಿ ಮಠಗಳು ಮಾಡಿದ, ಮಾಡುತ್ತಿರುವ

ಸೇವೆಯನ್ನು ಕಾಲ ಮತ್ತು ಲೋಕ ಗಮನಿಸುತ್ತಲೇ ಬಂದಿವೆ. ಹಳೆಯ ಮೈಸೂರಿನ ಕಡೆಯಲ್ಲಿ ಚಿತ್ರದುರ್ಗದ ಮುರುಘಾ ಮಠ, ಸಿರಿಗೆರೆಯ ತರಳಬಾಳು ಮಠ, ಮೈಸೂರಿನ ಸುತ್ತೂರು ಶಿವರಾತ್ರೀಶ್ವರ ಮಠ, ಕನಕಪುರದ ದೇಗುಲಮಠ, ದೇವನೂರಿನ ಮಠ, ತುಮಕೂರಿನ ಸಿದ್ಧಗಂಗಾ ಮಠಗಳು ಎದ್ದುಕಾಣುವಂತೆಯೇ ಹೊಸ ಮೈಸೂರು ಭಾಗದ, ಹುಬ್ಬಳ್ಳಿಯ ಮೂರುಸಾವಿರದ ಮಠ, ಧಾರವಾಡದ ಮೃತ್ಯುಂಜಯ ಮಠ, ಗದುಗಿನ ತೋಂಟದಾರ್ಯ ಮಠ, ಇಲಕಲ್ಲಿನ ವಿಜಯಮಹಾಂತೇಶ್ವರ ಮಠ, ಭಾಲ್ಕಿಯ ಹಿರೇಮಠ, ಅರಬಾವಿಯ ದುರ್ದುಂಡೀಶ್ವರ ಮಠ, ಹರಪನಹಳ್ಳಿಯ ಮಠ ಮುಂತಾದುವು ಕಣ್ಮುಂದೆ ನಿಲ್ಲುತ್ತವೆ. ಇಲ್ಲಿ ಹೆಸರಿಸುವಷ್ಟೇ ಸೇವೆಗೈದಿವೆ ಎಂದಲ್ಲ. ಇನ್ನೂ ಸಹಸ್ರಾರು ಮಠಗಳು ತಮ್ಮ ಎಲೆಮರೆಯ ಸೇವಾ ಬದುಕನ್ನು ನಡೆಸಿಕೊಂಡು ಬರುತ್ತಿವೆ. ಒಂದೊಂದು ಮಠಗಳ ಸೇವೆಯೂ ಒಂದೊಂದು ವೈಶಿಷ್ಟ್ಯದಿಂದ ಕೂಡಿರುವುದೇ ಆಗಿರುವುದು ಮತ್ತೊಂದು ವಿಶೇಷ. ಸಿದ್ಧಗಂಗಾ ಮಠ ತ್ರಿವಿಧ ದಾಸೋಹದ ಜತೆಗೆ ಜಾತ್ರೆ ಮತ್ತು ವಸ್ತು ಪ್ರದರ್ಶನಗಳ ಹಾಗೂ ಗ್ರಾಮಾಂತರ ಬಸವ ಜಯಂತಿಗೆ ಹೆಸರಾದರೆ, ಸುತ್ತೂರು ಮಠ ಶಿವರಾತ್ರೀಶ್ವರ ಜಯಂತಿಯ ಮೂಲಕ ಸಂಸ್ಕೃತಿ ಪ್ರಸಾರದಲ್ಲಿ ನಿರತವಾಗಿರುವಹಾಗೆ, ದೇಗುಲ ಮಠ ಪ್ರವಚನಗಳ ಮೂಲಕ ನೀತಿ ಸಲ್ಲಿಸುವಂತೆ, ಸಿರಿಗೆರೆಯ ಮಠ ಅಣ್ಣನ ಬಳಗ, ಅಕ್ಕನ ಬಳಗಗಳ ಮೂಲಕ ಶರಣರ ನಾಟಕಗಳನ್ನು ಪ್ರದರ್ಶಿಸುತ್ತ ಜನಜಾಗೃತಿಗೈದ ಚಿತ್ರದುರ್ಗ ಮಠ ದಸರಾ ಉತ್ಸವದ ಸಂದರ್ಭದಲ್ಲಿ ವಿದ್ವಾಂಸರ ಉಪನ್ಯಾಸ ಏರ್ಪಡಿಸುತ್ತ ನಡೆದಿತುವುದಾಗಿದೆ. ಅಂತೆಯೇ ಇಲಕಲ್ಲಿನ ಚಿತ್ತರಗಿ ಸಂಸ್ಥಾನದ ಶ್ರೀ ವಿಜಯ ಮಹಾಂತೇಶ್ವರ ಮಠ " ಮಹಾಂತ ಜೋಳಿಗೆ " ಹಾಗೂ ಶಿವಾನುಭವ ತರಬೇತಿ ಶಿಬಿರಗಳ ಮೂಲಕ ಸತ್ಪರಂಪರೆಯನ್ನೇ ನಡೆಸಿಕೊಂಡು ಬರುತ್ತಿವೆ ಹಾಗೆಯೇ ಭಾಲ್ಕಿಯ ಹಿರೇಮಠ, ಶಿವಾನುಭವ ತರಬೇತಿ ಶಿಬಿರ ಹಾಗೂ ಶರಣ ಧರ್ಮ ಬೆಳವಣಿಗೆಯಲ್ಲಿ ನಿರಂತರ ಶ್ರಮಿಸುತ್ತಿದೆ. ರಾಜ್ಯದ, ರಾಷ್ಟ್ರದ ಅಭಿವೃದ್ಧಿಯಲ್ಲಿ ಮೌನವಾಗಿ ಭಾಗವಹಿಸಿವೆ ಮಠವೆಂದರೆ ಅದು ಗಳಿಸಿದ ಆಸ್ತಿಯಲ್ಲ ಕಟ್ಟಿಸಿದ ಕಟ್ಟಡಗಳಲ್ಲ, ಅದು ಸುಧಾರಿಸಿದ, ಸಂಸ್ಕಾರಗೊಳಿಸಿದ ಜನಾಂಗವೆಂಬುದನ್ನು ಮರೆಯಬಾರದು. ಇಂದು ಮಠಮಾನ್ಯಗಳು ಬೇಕೆ? ಏಕೆ ಬೇಕು? ಎಂದು ಪ್ರಶ್ನಿಸುವ ವಿಚಾರವಂತ ಜನಾಂಗ ಅವುಗಳು ಮಾಡಿರುವ ಅಂದಂದಿನ ಯುಗಧರ್ಮಕ್ಕನುಗುಣವಾದ ಸೇವೆಯನ್ನು ಗಮನಿಸಿದರೆ ಒಳ್ಳೆಯದು. ಸಂಘಟನೆಯ ಮೂಲ ಘಟಕಗಳಾದ ಮಠಗಳು ಯಾವುದೇ ರಾಷ್ಟ್ರದ ಅತ್ಯಮೂಲ್ಯವಾದ ಸಂಪತ್ತು, ಅವು ರೋಗಗ್ರಸ್ತವಾಗದಂತೆ ನೋಡಿಕೊಳ್ಳುವುದು ಯುವಜನಾಂಗದ, ವಿಚಾರವಂತ ಸಮಾಜದ ಆದ್ಯ ಕರ್ತವ್ಯ. ಈ ಎಲ್ಲ ವೀರಶೈವ ಮಠಗಳೂ ಸಂಘಟಿತವಾದಾಗ ಸಮಾಜ ಜೀವನ ಸುಂದರವಾಗಿ ಕಂಗೊಳಿಸೀತು! ಹಾಗಾಗಲಿ ಎಂದೇ ವಿನಮ್ರ ಪ್ರಾರ್ಥನೆ ●

—ಟಿ. ಆರ್. ಮಹಾದೇವಯ್ಯ
578, 8ನೇ ಮುಖ್ಯರಸ್ತೆ ಮಾಗಡಿ-ಕಾರ್ಡ್ ರಸ್ತೆ ವಿಸ್ತರಣ.
ವಿಜಯನಗರ ಬೆಂಗಳೂರು-560040

# ಪೂಜೆ

ಜಗತ್ತಿನ ಎಲ್ಲ ಧರ್ಮಗಳೂ ಮಾನವನ ಮನಸ್ಸಿನ ಸಂಸ್ಕಾರಕ್ಕಾಗಿ ಕೆಲವು ಆಚಾರ ಸಂಹಿತೆಗಳನ್ನು ಮುಂದಿಟ್ಟವೆ. ಇಂಥ ಆಚರಣೆಗಳು, ವ್ರತ ನಿಯಮಗಳು ಏಕೆ? ಮನಸ್ಸನ್ನು ಸಂಸ್ಕರಿಸಿಕೊಳ್ಳಲು ವ್ರತಗಳನ್ನು ಆಚರಿಸಿ ದೇಹವನ್ನು ದಣಿಸುವುದು, ಮನಸ್ಸನ್ನು ಮಣಿಸಲು ಮಾತ್ರ. ಅದು ಸಿದ್ಧಿಸದಿದ್ದರೆ ವ್ರತಗಳಿಗೂ ಅರ್ಥವಿಲ್ಲ; ದೇಹದಂಡನೆಗೂ ಅರ್ಥವಿಲ್ಲ.

ಪೂಜೆ ಮನುಷ್ಯನನ್ನು ಅಂತರ್ಮುಖಿಯನ್ನಾಗಿ ಮಾಡುವ ಮಹತ್ವದ ಸಾಧನ. ದುರ್ದೈವವೆಂದರೆ ಈ ಅಮೂಲ್ಯ ಸಾಧನಕ್ಕೆ ಯಾಂತ್ರಿಕತೆ ಹಾಗೂ ಡಾಂಭಿಕತೆಗಳು ಶಾಪವಾಗಿ ಪರಿಣಮಿಸಿವೆ. ದಾಸರೆಂದಂತೆ ಲೋಕ ಮೆಚ್ಚಲೆಂದು ಮಾಡುವ ಆಡಂಬರದ ಪೂಜೆ, ಅಂತರಂಗ ಶುದ್ಧವಿಲ್ಲದೆ, ಚಂಚಲ ಮನದಿಂದ ಮಿಂದೆವೆಂದು ಗಡಗಡ ನಡುಗುತ್ತ, ಕಂಚುಗಾರರ ಅಂಗಡಿಯಂತೆ ಮಿರುಗುವ ಪ್ರತಿಮೆಗಳನ್ನಿಟ್ಟು, ಮಂತ್ರ-ತಂತ್ರಗಳ ಆರ್ಭಟದಿಂದ, ಘಂಟೆಯ ಝಣತ್ಕಾರದಿಂದ ಮಾಡುವ ಯಾಂತ್ರಿಕ ಪೂಜೆ, ಪೂಜೆಯೆ? ಅದು 'ಪೂಜ', ಅಂದರೆ ಸೊನ್ನೆ.

ಮಿಂದು ಮಡಿಯುಡುವುದು ಅಂತರಂಗಶುದ್ಧಿಗೆ ಸಾಧಕವಾಗಬೇಕು. ಭೌತಿಕ ಶುದ್ಧಿ ಮಾನಸಿಕ ಶುದ್ಧಿಗೆ ಅನುವು ಮಾಡಿಕೊಡಬೇಕು. ಅಂದರೆ ಮಡಿಗಿಂತ, ಮಡಿಯಿಂದ ಉಂಟಾಗಬೇಕಾದ ಮಾನಸಿಕ ಪರಿಪಾಕ ಮುಖ್ಯವೆಂದಂತಾಯಿತು. ಪೂಜೆಯಿಂದ ದೊರೆಯುವ ಪರಿಶುದ್ಧತೆ ಹಾಗೂ ಪ್ರಸನ್ನತೆಗಳು ಬಾಳಿಗೆ ಬೇಕಾದ ಕೆಚ್ಚು-ನಚ್ಚನ್ನು, ಸಮಚಿತ್ತತೆಯನ್ನು ಒದಗಿಸಬೇಕು. ಆದರೆ ನಾವು ಮಡಿಗೆ, ಪೂಜಾಸಂಭ್ರಮಕ್ಕೆ ಕೊಟ್ಟಷ್ಟು ಪ್ರಾಧಾನ್ಯತೆಯನ್ನು ಅದರಿಂದ ಒದಗಬೇಕಾದ ಮಾನಸಿಕ ಸಂಸ್ಕಾರದ ಕಡೆಗೆ ಕೊಡುವುದು ಕಾಣಿಸುತ್ತಿಲ್ಲ. ತಿರುಳನ್ನೆಸೆದು ಕರಟವನ್ನೇ ಆದರಿಸುತ್ತಿದ್ದೇವೇನೋ ಎನ್ನಿಸುತ್ತದೆ.

'ದಾರಿಗೈ ಊರಲ್ಲ', ಕನ್ನಡ ಜಾಣ್ಣುಡಿಯೊಂದು ನುಡಿಯುತ್ತದೆ. ಊರಿಗೆ ದಾರಿ ತೋರಿಸುತ್ತಾ ನಿಂತುಕೊಂಡ ಕೈಮರವೇ ಆ ಊರಾಗಲು ಸಾಧ್ಯವಿಲ್ಲ. ಅದು

ತೋರಿಸುವತ್ತ, ನಿರ್ದಿಷ್ಟ ದೂರ ಸಾಗಬೇಕು. ಆಚಾರ ಸಂಹಿತೆಯನ್ನು ಉರು ಹೊಡೆದು ಪಾಠ ಒಪ್ಪಿಸಿದರೂ ಪ್ರಯೋಜನವಿಲ್ಲ. ಅದರಲ್ಲಿ ಹೇಳಿದಂತೆ ಯಾಂತ್ರಿಕ ವಾಗಿ ಆಚರಿಸಿದರೂ ಪ್ರಯೋಜನವಿಲ್ಲ. ಆ ಆಚರಣೆಯ ಉದ್ದೇಶವನ್ನು ತಿಳಿದು, ಅದರ ಕ್ರಮವರಿತು ಮನಃಪೂರ್ವಕವಾಗಿ ನಡೆದರೆ ಅದರ ಉದ್ದೇಶ ಈಡೇರುತ್ತದೆ; ಆಚರಿಸುವಾತ ಆ ಸತ್ಫಲಕ್ಕೆ ಭಾಜನನಾಗುತ್ತಾನೆ.

ಪೂಜೆಯಲ್ಲಿ ಯಾಂತ್ರಿಕತೆ ತಲೆದೋರಿದರೆ ಪರಿಣಾಮ ಘೋರ. 'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ' ಎಂಬಂತಾಗುತ್ತದೆ. ನಿರಾಳವಿಲ್ಲದೆ ಯಾವ ವ್ರತವನ್ನು ಆಚರಿಸಿದರೂ ನಿಷ್ಫಲ ಕಟ್ಟಿಟ್ಟದ್ದೆ. "ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ." ಅದಕ್ಕೇ "ಸಜ್ಜನನಾಗಿ ಮಜ್ಜನಕ್ಕೆರೆಯಬೇಕು. ಶಾಂತನಾಗಿ ಪೂಜೆ ಮಾಡಬೇಕು" ಎಂದರು ಶರಣರು. ಹೊರಗಡೆ ದೇಹಕ್ಕೆ ವಿಭೂತಿ' ನಾಮ ಅಥವಾ ಮುದ್ರೆಗಳನ್ನು ಹಂಚಿಕೊಂಡರೆ ಸಾಲದು ಆ ಲಾಂಛನ ಗಳು ಮನಸ್ಸನ್ನು ಮಾಗಿಸುವ ಸಾಧನವಾಗಬೇಕು "ಹೊರಗೆ ಪೂಸಿ ಏವೆನಯ್ಯ ಒಳಗೆ ಶುದ್ಧನಾಗದನ್ನಕ್ಕ; ಮಣಿಯ ಕಟ್ಟಿ ಏವೆನಯ್ಯ ಮನ ಮುಟ್ಟದನ್ನಕ್ಕ" ಎಂದು ಅವರು ಹೇಳಿದ್ದು ಇದಕ್ಕೇ.

ದಿವಸಕ್ಕೆ ಎರಡುಸಲವೊ, ಮೂರುಸಲವೋ ದೇವರ ಮನೆಯಲ್ಲಿ ಕುಳಿತು ಶಾಸ್ತ್ರೋಕ್ತವಾಗಿ ಮಾಡುವ ಪೂಜೆ ಒಂದು. ಇದು ನಿಯತಕಾಲಿಕ ಪೂಜೆ ಇನ್ನೊಂದು ಸಾರ್ವಕಾಲಿಕ ಪೂಜೆ ಒದಿಂದೆ. ತಾನು ಬದುಕಿ, ಪರರನ್ನು ತನ್ನಂತೆಯೇ ಬಗೆದು ಅಪರನ್ನೂ ಬಾಳಗೊಡುವವನ ನಡೆ-ನುಡಿಗಳೆಲ್ಲವೂ ಪೂಜೆಯೇ. ನಾಲ್ಕು ಜನಕ್ಕೆ ಸಂತೋಷವನ್ನುಂಟು ಮಾಡುವ ಸತ್ಕಾರ್ಯವೂ ಕೂಡ ದೇವರ ಪೂಜೆಯೇ "ಸಂತೋಷ ಜನಯೇತ್ ತದೇವ ಈಶ್ವರ ಪೂಜನಂ" ಎಂಬ ಸೂಕ್ತಿ ಇದನ್ನೇ ಸಾರು ತ್ತದೆ. ನಿಸ್ವಾರ್ಥ ಬುದ್ಧಿಯಿಂದ, ಸತ್ಯ ಶುದ್ಧನಾಗಿ ಮಾಡುವ ಕೆಲಸವೆಲ್ಲವೂ ಪೂಜೆಯೇ ಆಗಿಬಿಡುತ್ತದೆ.

ಆದ್ದರಿಂದ ಪೂಜಿಸುವಾತ, ತನ್ನ ಪೂಜೆ ಸಾರ್ಥಕವಾಗಬೇಕಾದರೆ ಅರಿತು ಆಚರಿಸಬೇಕು. ಪೂಜೆ ಎನ್ನುವುದು ಲೌಕಿಕ-ಪಾರಮಾರ್ಥಿಕಗಳ ರಸಸೇತುವೆ ಆತ್ಮ-ಪರಮಾತ್ಮ ಸಾಮರಸ್ಯದ ನೆಲೆಗಟ್ಟು ಎಂದು ತಿಳಿದಾಗ ಜೀವನದಲ್ಲಿ ಅದರ ಮಹತ್ವ ಎಷ್ಟು ಎಂಬುದರ ಅರಿವಾದೀತು. ಬಹಿರಂಗಪೂಜೆ ಅಂತರಂಗ ಪೂಜೆಗೆ ಅನುವು ಮಾಡಿಕೊಡಬೇಕು. ನಿಯತಕಾಲಿಕ ಪೂಜೆಯು ಸಾರ್ವಕಾಲಿಕಪೂಜೆಗೆ ಪರಿಶುದ್ಧಗೊಳಿಸಿ ಅವನ ಲೌಕಿಕ ಬಾಳಿಗೆ ಶ್ರೇಯಸ್ಸನ್ನು, ಪಾರಮಾರ್ಥಿಕ ಜೀವ ನಕ್ಕೆ ಪ್ರೇಯಸ್ಸನ್ನುಂಟುಮಾಡುವ ಪೂಜೆಯೇ ನಿಜವಾದ ಪೂಜೆ, ಉಳಿದುದೆಲ್ಲಾ ಬರೀ 'ಪೂಜೆ'.

# ಬಸವ ಪ್ರತಿಜ್ಞಾ

—ಟಿ. ಎಸ್. ಮಹಾದೇವಯ್ಯ

"ದೇವಸಹಿತ ಭಕ್ತ ಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ತಲೆದಂಡ ತಲೆದಂಡ ಕೂಡಲ ಸಂಗಮದೇವಾ''

ಸತ್ಯ ಸನಾತನ ಧರ್ಮದ ಒಳ ತಿರುಳನ್ನು ಸವಿಯುವವರಿಗೆ, ಸವಿದಿರುವವರಿಗೆ ಆಗಿನ ವರ್ಣಾಶ್ರಮ ಧರ್ಮಗಳ ಪದ್ಧತಿಯು ಯಾವ ತಳಹದಿಯ ಮೇಲೆ ನಿಂತಿದ್ದಿತು. ಅದರ ಮೂಲಮಂತ್ರವಾವುದು? ಆ ಜೀವನದ ಗಾನವಾವುದು? ಎಂಬುದು ಅರಿವಾಗುವುದು. ಮನುಷ್ಯ ಜೀವನದ ಉದ್ಧಾರಕ್ಕೆ, ಸಮಾಜದ ಉನ್ನತಿಗೆ ಮತ್ತು ರಾಷ್ಟ್ರದ ಏಳಿಗೆಗೆ ಜನರು ತಮ್ಮ ತಮ್ಮಲ್ಲಿ ಜೀವನದ ಕುರುಹಾದ ಒಂದು ಕಾರ್ಯವನ್ನು ಸ್ವೀಕರಿಸಲೇಬೇಕು. ಒಬ್ಬನು ಅಧ್ಯಯನ ಮಾಡಿ ಧರ್ಮ ಪ್ರತಿಪಾದನೆ ಮಾಡಿ ಶಾಸ್ತ್ರ ಚರ್ಚೆಯಲ್ಲಿ ಮುಂದುವರಿದು ಬ್ರಾಹ್ಮಣನಾದರೆ ಮತ್ತೊಬ್ಬನು ಖಡ್ಗವನ್ನಿಡಿದು ರಣರಂಗದಲ್ಲಿ ತನ್ನ ತಾಯಿನಾಡಿನ ರಕ್ಷಣೆಗಾಗಿ ಹೃದಯದ ರಕ್ತವನು ಬಸಿದು ಶಸ್ತ್ರ ಚರ್ಚೆಯನ್ನು ಮಾಡಿ ಕ್ಷತ್ರಿಯನಾಗುವನು. ವ್ಯವಹಾರದಲ್ಲಿ ಹಲವಾರು ಕೆಲಸಗಳನ್ನು ಮಾಡಲು ಇನ್ನೂ ನೂರಾರು ಕಾರ್ಯಗಳನ್ನು ಮನುಷ್ಯನು ಸ್ವೀಕರಿಸಬೇಕು. ಜೀವನಕ್ಕೆ ಆವಶ್ಯಕವಾದ ಧಾನ್ಯಾದಿ ವಸ್ತುಗಳ ಸಂಗ್ರಹಮಾಡಿ ಅವುಗಳಿಗೆ ಹಂಚುವ ಕಾರ್ಯ ಗೌರವವನ್ನು ಸ್ವೀಕರಿಸುವವನು ವೈಶ್ಯನಾಗುವನು. ನಿಸರ್ಗದೇವತೆಯ ಮಡಿಲಿನಲ್ಲಿ ಆನಂದದಿಂದ ನಲಿದಾಡಿ, ಪೈರುಪಚ್ಚೆಗಳ ಬೆಳವಣಿಗೆಗೆ ಕಾರಣವಾಗಿ, ಜಗತ್ತಿನ ನಾಗರಿಕತೆಗೆ ಮೂಲ ಪ್ರಾಯನಾದವನ ಕರ್ಮವು ಅತ್ಯಂತ ಶ್ರೇಷ್ಠವಾಗುವುದು. ಅವನನ್ನು ಶೂದ್ರನೆನ್ನುವರು, ಮನುಷ್ಯನು ವ್ಯವಹಾರ ರಂಗದಲ್ಲಿ ಯಾವ ಕಾರ್ಯವನ್ನೇ ಆಗಲಿ ಸ್ವೀಕರಿಸಿದ್ದರೂ ಅವನು ತನ್ನ ಆತ್ಮ ಬೆಳವಣಿಗೆಗೆ ತಕ್ಕ ಆಧ್ಯಾತ್ಮಿಕ ಸಾಧನೆಯಲ್ಲಿ ಬೇಕಾದ ಹಾಗೆ ಮುಂದುವರಿಯಬಹುದು. ಇದನ್ನೇ ಶಿವ ಶರಣರೆಲ್ಲರೂ ತಮ್ಮ ಜೀವನರಂಗದಲ್ಲಿ ಅನುಭವದ ಹಾದಿಯಿಂದ ಅಭಿನಯಿಸಿದರು. ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆದು ಶುದ್ಧಿಮಾಡಿದರು. ಹಡಪದ ಅಪ್ಪಣ್ಣನವರು ಕ್ಷೌರಮಾಡಿ ಜೀವನವನ್ನು ಸಾಧಿಸಿದರು. ಬಸವೇಶ್ವರನು ದಂಡಾಧೀಶನಾಗಿದ್ದನು. ಆದರೆ ಎಲ್ಲರೂ ಶಿವಾನುಭವ ಮಂಟಪದಲ್ಲಿ ಒಂದೇ ವಿಧವಾದ ಶೈವೀ ಭಾವನೆಯಿಂದಲೂ, ಪೂರ್ಣವಾದ ವಿಶಾಲ ವಿಶ್ವಪ್ರೇಮದ ಭಾವನೆಯಿಂದಲೂ ಕೂಡಿ ಪರಮಾತ್ಮನ ಪದತಲದಲ್ಲಿ ಜೀವನ ಅರ್ಪಣ ಮಾಡುತ್ತಿದ್ದರು. ಕಾಯಕವು ವ್ಯವಹಾರಭೂಮಿಗೆ ಧರ್ಮವು ಆಧ್ಯಾತ್ಮಿಕ ರಂಗಕ್ಕೆ.

ಎಲ್ಲ ಧರ್ಮಗಳ ಅಳಿವು ಉಳಿವುಗಳಿಗೆ, ಎಲ್ಲ ನಾಡುಗಳ ಏಳಿಗೆಗೆ, ಎಲ್ಲ ಮನುಷ್ಯರ ಉನ್ನತಿ ಅವನತಿಗಳಿಗೆ ಕಾಯಕವು ಅತ್ಯಾವಶ್ಯಕವೆಂದು ತಿಳಿದ ಶಿವ ಶರಣರು ಕಾರ್ಯಗೌರವವು (Dignity of Labour) ಬಹಳ ಮಹತ್ವದ್ದೆಂದು ಭಾವಿಸಿ ಆದರಿಸಿದ್ದರು. ಅದೂ ಜೀವನ ಉನ್ನತಿಯ ಒಂದು ಅಂಗ. ಅದೂ ಒಂದು ಕಲೆ, ಸ್ವಾಮಿ ರಾಮತೀರ್ಥರು ಹೇಳುವಂತೆ "ಜೀವನ ಕಲೆಯನ್ನು ಚೆನ್ನಾಗಿ ಬಲ್ಲವನೇ ಯೋಗಿ" ಆವನದೇ ನಿಜವಾದ ಯೋಗ. ಬಸವೇಶ್ವರನು ಆ ಕಲೆಯಲ್ಲಿ ನಿಷ್ಣಾತನಾದ ಉಪಾಸಕನಾಗಿದ್ದನು. ಹೃದಯವನ್ನು ವಿಶಾಲವಾಗಿ ತೆರೆದು ಜಗತ್ತಿನಲ್ಲಿರುವ ಎಲ್ಲ ಭಕ್ತರಿಗೂ ಸಮತೆಯನ್ನು ಕಲ್ಪಿಸಿದ್ದನು.

ಮನುಷ್ಯನು ತನ್ನ ಶ್ರೀಮಂತಿಕೆ, ರೂಪು, ವೈಭವ, ವೈಖರಿಗಳಿಂದ ಮಹಾತ್ಮನಾಗಲಾರನು. ದೊಡ್ಡ ಮನುಷ್ಯನೆಂದು ಭಾವಿಸಲ್ಪಡಲಾರನು, ಅವನ ಆತ್ಮನ ಬೆಳವಣಿಗೆಯಿಂದ ಮಹಾಪುರುಷನಾಗುವನು. ಜೀವದೇವರ ಕೂಡಿಕೆಯಲ್ಲಿ ಅವನ ಅನುಭವ ಭೂಮಿಯು ಎಷ್ಟರಮಟ್ಟಿಗೆ ಪರಿಪಕ್ವವಾಗಿದೆಯೆಂಬುದರ ಮೇಲೆ ಆ ಜೀವನಕ್ಕೆ ಬೆಲೆ ಕಟ್ಟಬೇಕು. ಹೀಗಿರುವಾಗ ಕಾಯಕದಿಂದ ಅವನಿಗೆ ಬೆಲೆ ಕಟ್ಟುವುದು ಧರ್ಮವಲ್ಲ. ಅದು ಅಸಂಬದ್ಧ ಪ್ರಲಾಪವೆಂದು ಭಾವಿಸಬೇಕು, ಅದನ್ನು ಅರ್ಥವಿಲ್ಲದ ನುಡಿಯೆಂದು ತಿಳಿಯಬೇಕು.

ಲಿಂಗಧಾರಣೆಯಿಂದ ಶಿವನ ಆರಾಧನೆಯನ್ನು ಮಾಡುವ ಕಾರ್ಯರಂಗಕ್ಕಿಳಿದ ಮಹನೀಯರೆಲ್ಲರೂ ಹೃದಯವನ್ನು ವಿಶಾಲವಾಗಿ ತೆರೆದು ಜೀವರಾಶಿಗಳಲ್ಲೆಲ್ಲಾ ಒಂದೇ ಭಾವನೆಯನ್ನು ಪ್ರಕಟಿಸಿ, ಒಂದೇ ವಿಧವಾದ ಪೂರ್ಣಪ್ರೇಮದಿಂದಲೂ, ಪವಿತ್ರ ಹೃದಯದಿಂದಲೂ, ಎಲ್ಲರನ್ನೂ ಎದೆಗಪ್ಪಿಕೊಳ್ಳುತ್ತಿದ್ದುದು ಶಿವಶರಣ ರಾಜ್ಯದ ಮನೆ ಮಾತಾಗಿತ್ತು ಪರಮಾತ್ಮನಿಲ್ಲದ ನಿಕಟಪ್ರೇಮ, ಕಾಯಕದ ಮಹತ್ವ, ವರ್ಣಾಶ್ರಮ ಧರ್ಮಗಳ ಸತ್ಯತೆಗಳನ್ನು ಬಸವೇಶ್ವರನು ಇಲ್ಲಿ ಹೇಗೆ ಜೀವಿಸಿದ್ದನೆಂಬುದನ್ನು ಈ ನುಡಿಗಳಲ್ಲಿ ಹಾಡಿರುವನು.

"ಪರಮಾತ್ಮನಲ್ಲಿ ಪ್ರೇಮ ಭಾವನೆಯನ್ನಿಟ್ಟು, ಹೃದಯದಲ್ಲಿ ಅವನಿಗೆ ಮನೆ ಮಾಡಿಕೊಟ್ಟು ದೇಹವು ದೇವನ ಮಂದಿರವೆಂದು ತಿಳಿದ ಯಾವ ಭಕ್ತರಾದರೂ ಮನೆಗೆ ಬರಲಿ, ನಿನ್ನ ಕೆಲಸವೇನೆಂದು ಅನಾದರಣೆಯಿಂದ ನಾನು ಕೇಳಿದೆನಾದರೆ ನಿನ್ನ ಪ್ರಮಥರ ಆಣೆಯಿರಲಿ, ಪರಮಾತ್ಮನೇ ನಿನ್ನ ಚರಣಗಳ ಬಳಿ ಸರ್ವವನ್ನೂ ಅರ್ಪಿಸಿದ ಭಕ್ತಕೋಟಿಯಲ್ಲಿ ಕುಲವನರಸಿದರೆ ಜಗನ್ಮಾತೆಯ ಆಸೆಯಿರಲಿ ಎಂದು ಪ್ರತಿಜ್ಞಾಪೂರ್ವಕವಾಗಿ ಈ ನುಡಿಗಳನ್ನು ಆಡಿರುವನು.

# ವೇದ ಕಾಲದಲ್ಲಿ ಜನಿಸಿದ ಮಹಾಶಕ್ತಿ 'ಸರಸ್ವತಿ'

—ಪ. ರಾಮಕೃಷ್ಣಶಾಸ್ತ್ರಿ
"ಶಿವಶಕ್ತಿ ನಿಲಯ", ಅಂಜೆ, ಮಜ್ಜಿನ–574295 (ದ. ಕ.)

ವಾಗ್ದೇವಿಯಾಗಿ, ಯಜ್ಞರಕ್ಷಕಳಾಗಿ, ದಿವ್ಯಶಕ್ತಿಯಾಗಿ ಹಲವು ವಿಧದಿಂದ ಹಲವು ರೂಪದಲ್ಲಿ ಆರಾಧಿಸಲ್ಪಡುವ ಸರಸ್ವತಿ ಎಂಬ ವಿಶಿಷ್ಟ ಶಕ್ತಿಯ ಕಲ್ಪನೆ ಪ್ರಾಚೀನವಾದುದು. ವಿಘ್ನ ನಿವಾರಕನಾದ ಗಣಪತಿಯ ಸೃಷ್ಟಿಯಾಗುವುದಕ್ಕೆ ಮೊದಲು ಸರಸ್ವತಿಯನ್ನೇ ಆ ಸ್ಥಾನದಲ್ಲಿ ಆರಾಧಿಸಲಾಗುತ್ತಿತ್ತು. ಸುಮಾರು 5-6 ಸಾವಿರ ವರ್ಷಗಳ ಹಿಂದಿನದೆಂದು ನಂಬಬಹುದಾದ ಋಗ್ವೇದದಲ್ಲಿ ಅಗ್ನಿಯು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಪ್ರಕಟವಾಗುವ 3 ರೂಪಗಳಲ್ಲಿ ಸರಸ್ವತಿ ಕೂಡ ಒಂದೆಂದೂ ಅಂತರಿಕ್ಷದಲ್ಲಿ ಸರಸ್ವತಿ ಸಿಡಿಲು, ಮಿಂಚುಗಳ ಪ್ರತೀಕವೆಂದೂ ಬಣ್ಣಿಸಲಾಗಿದೆ. ಇನ್ನು ಕೆಲವು ಸೂಕ್ತಗಳು ಅವಳೇ ವಾಕ್ ದೇವತೆಯೆಂದು ಹೇಳಿದ್ದರೆ ಬೃಹದ್ದೇವತಾದಲ್ಲಿ ಈ ವಾಕ್‌ಗೆ 3 ರೂಪಗಳಿವೆಯೆಂದೂ ಭೂಮಿಯಲ್ಲಿ ಅದು ನದಿ, ಓಷಧಿ, ನೀರುಗಳ ರೂಪದಲ್ಲಿವೆಯೆಂದೂ ಅದಿತಿ, ವಾಕ್, ಅದಿತಿ, ದುರ್ಗೆ, ಸೂರ್ಯ, ಆಸರಣ್ಯಾ, ಉಷಾಃ ಇತ್ಯಾದಿಗಳೆಲ್ಲ ಆ ಸರಸ್ವತಿಯ ಹೆಸರುಗಳೆಂದೂ ವಿವರಗಳಿವೆ.

ಸರಸ್ವತಿ ಎಂದರೆ ಯಾರು? ಪುರಾಣಗಳ ಕಲ್ಪನೆ ಪ್ರಕಾರ ಆಕೆ ಜಗದ ಚೆಲುವನ್ನು ಸಕಲ ವಿದ್ಯೆಗಳನ್ನೂ ಮೈಗೂಡಿಸಿಕೊಂಡು ಸೃಷ್ಟಿಗೊಂಡ ಅನಂತರ ಬ್ರಹ್ಮನ ಮಡದಿಯಾದಳೆಂದು (ಮತ್ಸ್ಯಪುರಾಣ) ಹೇಳುತ್ತದೆ. ಋಗ್ವೇದದಲ್ಲಿ ಆಕೆ ಪ್ರಜಾಪತಿಯ ಮಗಳು; ಅವಳೊಂದಿಗೆ ಪ್ರಜಾಪತಿ ಮಿಲನ ಹೊಂದಿದಾಗ ಬ್ರಹ್ಮ ಜನಿಸಿದ. ಋಗ್ವೇದದ ಪ್ರಕಾರ ವಾಕ್‌ಗೆ ಸಂಬಂಧಿಸಿದ ವಾಚಸ್ಪತಿ ದೇವತೆಗೆ ವಿಶ್ವಕರ್ಮ ಎಂಬುದು ಇನ್ನೊಂದು ಹೆಸರು. ವಾಗ್ದೇವಿ ಅವನ ಪತ್ನಿ ಈ ವಾಚಸ್ಪತಿಯೇ ಬೃಹಸ್ಪತಿ; ಬ್ರಹ್ಮ; ಪ್ರಜಾಪತಿ, ಸಂತಾನವನ್ನು ನೀಡುವ ದೇವತೆ ಎಂಬುದು ಗೃಹ್ಯಸೂತ್ರದ ವಾದ. ಈ ದಂಪತಿಗಳಿಗೆ ದ್ವಾದಶಾದಿತ್ಯರು, ವಸುಗಳು, ರುದ್ರರು, ವಿಶ್ವದೇವತೆಗಳು ಮಕ್ಕಳೆನ್ನುತ್ತದೆ ಶತಪಥ ಬ್ರಾಹ್ಮಣ.

ಸರಸ್ವತಿ ಆರಂಭದಲ್ಲಿ ನದಿರೂಪದಲ್ಲಿ ಹರಿಯುತ್ತಿದ್ದಳಂತೆ ವಸಿಷ್ಠನ ವಿನಾಶಕ್ಕಾಗಿ ವಿಶ್ವಾಮಿತ್ರ ಅದನ್ನು ರೂಪಿಸಿದ. 'ಇಮಂ ಮೇ ಗಂಗೇ ಯಮುನೇ ಸರಸ್ವತಿ ಶತದ್ರುಸ್ತೋಮಗ್ಂ' ಎಂದು ಕುರುಕ್ಷೇತ್ರ ಪ್ರದೇಶದಲ್ಲಿ ಹರಿಯುತ್ತಿರುವ ಸರಸ್ವತಿ ನದಿಯನ್ನು ಋಗ್ವೇದ ಸ್ತುತಿಸಿತು. ಆ ಕಾಲದಲ್ಲಿ ಜನ-ಜಾನುವಾರಗಳ ಜೀವನಾ

ಧಾರವಾಗಿದ್ದ ಈ ನದಿಯ ದಡ ಹಲವಾರು ಋಷಿಮುನಿಗಳ ತಪೋಭೂಮಿಯಾಗಿತ್ತು. ಬಳಿಕ ಸರಸ್ವತಿ ಧೇನುರೂಪದ ವಾಗ್ದೇವಿಯಾದಳು. ಯಜುರ್ವೇದ ಕಾಲದಲ್ಲಿ ದೇವಾದಿದೇವತೆಗಳ ಸರಿಸಮಾನವಾದ ಪದವಿಯನ್ನಲಂಕರಿಸಿ ಮೇಧಾದೇವಿ ಎಂಬ ಹೆಸರನ್ನು ಹೊಂದಿದಳು. ಪುರಾಣ ಕಾಲದಲ್ಲಿ ಪರಿಪೂರ್ಣ ವ್ಯಕ್ತಿತ್ವ ಹೊಂದಿ 3 ವಿಶಿಷ್ಟ ಮಹಾಶಕ್ತಿಗಳಲ್ಲಿ ಒಬ್ಬಳಾದಳು. ಋಗ್ವೇದದಲ್ಲಿ ಅವಳ ಸ್ತುತಿಪೂರ್ಣವಾದ ಹಲವು ಸೂಕ್ತಗಳಿವೆ. ಆ ಕಾಲದಲ್ಲಿ ಮೊದಲು ಇವನ್ನು ವಸಿಷ್ಠರು ರಚಿಸಿದುದರಿಂದ ವಸಿಷ್ಠರು ಯಾವ ದೇವತೆಯನ್ನು ಕುರಿತು ರಚಿಸಿದ ಸೂಕ್ತವನ್ನಾಗಲಿ ಪಠಿಸಿದೊಡನೆಯೇ ಆಯಾ ದೇವತೆ ಒಲಿಯುತ್ತಾಳೆಂಬ ನಂಬಿಕೆಯಿದ್ದುದರಿಂದ ಈ ಸೂಕ್ತಗಳಿಂದಾಗಿ ಸರಸ್ವತಿ ಒಬ್ಬ ಮಹತ್ವಪೂರ್ಣ ಶಕ್ತಿಯಾದಳು. ಅನಂತರ ವಿಶ್ವಾಮಿತ್ರನ ಮಗ ಮಧುಚ್ಛಂದ, ಬೃಹಸ್ಪತಿಯ ಮಗ ಭಾರದ್ವಾಜನೂ ಅವಳ ಸೂಕ್ತಗಳನ್ನು ರಚಿಸಿದರು.

ದ್ಯಾವಾ ಪೃಥಿವಿಗಳೆರಡರಲ್ಲೂ ವ್ಯಾಪಿಸಿದಂತೆ, ನದಿಗಳ ಮಧ್ಯದಲ್ಲಿ ಶಕ್ತಿವಂತಳಾದ ಸರಸ್ವತಿಯನ್ನು ತೃಪ್ತಿಗೊಳಿಸಲು ಭಕ್ತಿಯುತವಾದ ಸೂಕ್ತಗಳನ್ನು ರಚಿಸಲು ಋಷಿಗಳು ವಸಿಷ್ಠರನ್ನು ಒಂದೆಡೆ ಕೋರುವುದನ್ನು ಗಮನಿಸಿದರೆ ವೇದಕಾಲದಲ್ಲಿ ಆಕೆ ಒಂದು ನಿರಾಕಾರವಾದ, ಅವ್ಯಕ್ತವಾದ ಶಕ್ತಿಯಾಗಿದ್ದಳೆಂದು ಭಾವಿಸಬೇಕು.

ಸರ ದಸ್ಯಃ ಅಸ್ತೀನೀ > ಸರಸ್ವತಿ, ಸರಃ ತೇಜೋ ಅಸ್ಯ ವಿದ್ಯತೇ ಸಾ ಸರಸ್ವತೀ ಎಂದೂ ಸರಸ್ವತಿ ಶಬ್ದದ ವ್ಯುತ್ಪತ್ತಿಯನ್ನು ಸಾಧಲಾಗಿದೆ ಋಷಿಮುನಿಗಳು ಮೂರು ಲೋಕಗಳ ವಿಘ್ನನಿವಾರಕ ಶಕ್ತಿಯಾಗಿ ಅವಳನ್ನು ನಂಬಿದ್ದರೆಂಬುದಕ್ಕೆ ಋಗ್ವೇದದ 'ಪಾವಕಾನಃ ಸರಸ್ವತಿ', 'ತ್ರಿಷಧಸ್ಥಾ', 'ಸರಸ್ವತೀ ದೇವನಿದೊ' ಮೊದಲಾದ ಸೂಕ್ತಿಗಳಲ್ಲಿ ಆಧಾರ ಸಿಗುತ್ತದೆ. ಅವರೆಗೆ ಅವ್ಯಕ್ತಳಾಗಿದ್ದ ಅವಳಿಗೆ ಋಷಿಗಳು ಆಕಾರ ನೀಡಬಯಸಿ ಸರಸ್ವತಿ ನದಿಯನ್ನೇ ಆಕೆಯ ರೂಪವೆಂದು ನಂಬಿ, (ಅಜ್ಞಾನವೆಂಬ) ಪರ್ವತವನ್ನು ಭೇದಿಸಬಲ್ಲ ಶಕ್ತಿ ಈ ನದಿ (ವಾಗ್ದೇವಿ)ಗಿದೆಯೆಂದು ಸಾರಿದರು. ವಿಶ್ವಾಮಿತ್ರನ ಶಾಪದಿಂದ ಈ ನದಿ 7 ಕವಲಾಗಿ ಹರಿದಾಗ ಅದು ಅವಳ ಮಹಾಶಕ್ತಿಗಳ ಪ್ರತೀಕವೆಂದೇ ಗುರುತಿಸಿದರು.

ಆಗ ಸರಸ್ವತಿಯನ್ನು ಕೇವಲ ಜ್ಞಾನಶಕ್ತಿಯೆಂದು ಋಷಿಗಳು ಭಾವಿಸಲಿಲ್ಲ. 'ಸಕಲ ಅನ್ನಗಳೂ ನಿನ್ನನ್ನೇ ಆಶ್ರಯಿಸಿರುವುದರಿಂದ ನಮ್ಮನ್ನು ಅನುಗ್ರಹಿಸು' 'ದಾರಿದ್ರ್ಯದಿಂದ ಬಳಲುತ್ತಿರುವ ನಮಗೆ ಧನಕನಕಗಳನ್ನು ನೀಡು' ಎಂದೂ ಬೇಡಿಕೊಂಡಿದ್ದರು. ಸರಸ್ವತಿಯ ಕೃಪೆಯಿಂದ ದಿವ್ಯ ಮತ್ತು ಪಾರ್ಥಿವ ಲೋಕಗಳಲ್ಲಿ ಮಾನವರಿಗೆ ಅಗ್ನಿರೂಪವು ಬರುವುದೆಂದೂ ಭಾವಿಸಿದರು. ಸರಃ ಎಂದರೆ ತೇಜಸ್ಸು, ಬೆಳಕಿನ ಪ್ರಸಾರ; ಸಂಚಾರ ಎಂಬ ಧಾತು ಅದರ ಮೂಲ. ಜ್ಞಾನದ ಬೆಳಕಿನ ಪ್ರಸಾರ ಎಂಬುದರ ಅನ್ವರ್ಥವೇ ಸರಸ್ವತೀ ಹೆಸರಿನ ಕಲ್ಪನೆಗೆ ಆಧಾರ. ಸರಸ್ವತಿ

ಸಿಡಿಲು ಮಿಂಚುಗಳ ಮಗಳು ಎಂಬರ್ಥದಲ್ಲಿ ಋಗ್ವೇದ ಅವಳನ್ನು ಪಾವೀರವಿಯೆಂದು ಕರೆದಿದೆ.

ವಾಗ್ದೇವತೆ ಎಂದು ವರ್ಣಿತಳಾಗಿರುವ ಸರಸ್ವತಿಯನ್ನು ದೇವತಾಸ್ಥಾನಕ್ಕೆ ಏರಿಸಿರುವ ವೇದವು ಅವಳಿಂದ ಜ್ಞಾನ ಬುದ್ಧಿಗಳನ್ನಷ್ಟೇ ಆಶಿಸಲಿಲ್ಲ. ವಧ್ರ್ಯಶ್ವನಿಗೆ ಅವಳ ಕೃಪೆಯಿಂದ ದಿವೋದಾಸನು ಜನಿಸಿದುದರಿಂದ ಆಕೆಯು ವೀರ್ಯ ಮತ್ತು ಸಂತಾನ ಪ್ರದಳೆಂದೂ ಶಿಷ್ಟ(ದೇವತೆ)ರನ್ನು ವಿರೋಧಿಸುವ (ವೃತ್ರಾಸುರನಂತಹ) ಕೆಟ್ಟವರನ್ನು ಕೊಂದವಳೆಂದೂ ಪ್ರಸಿದ್ಧರಲ್ಲದವರಿಗೆ ಕೀರ್ತಿಯನ್ನು ತರುವ ತಾಯಿಯೆಂದೂ ವಾಕ್ಬಲದಿಂದ ಚೈತನ್ಯ ನೀಡುವವಳೆಂದೂ ಸ್ತುತಿಸಿದೆ. ಇನ್ನೊಂದೆಡೆ ಜನರ ಬುದ್ಧಿಯನ್ನು ಚುರುಕುಗೊಳಿಸುವ ಹೊಣೆಯೂ ಅವಳದು. ಪ್ರಿಯವಾದ ಸತ್ಯವನ್ನು ನಾಲಗೆಯಿಂದ ಹೊರಡಿಸುವುದು, ಒಳ್ಳೆಯ ಬುದ್ಧಿಯಿರುವವರನ್ನು ಸತ್ಕಾರ್ಯಕ್ಕೆ ಪ್ರೇರಿಸುವುದೂ ಅವಳೇ.

ಎಲ್ಲಾ ದೇವತೆಗಳನ್ನೂ ನಾನು ಅನುಸರಿಸಿ ಬರುತ್ತೇನೆ ಎನ್ನುವ ಸರಸ್ವತಿ ಒಲಿದರೆ ಸಕಲ ದೇವತೆಗಳೂ ಒಲಿಯುವವೆಂದು ಋಗ್ವೇದದಲ್ಲಿ ಹೇಳಿದೆ ವೃತ್ರಾಸುರನನ್ನು ಕೊಲ್ಲುವಾಗ ಇಂದ್ರನಿಗೆ ವಾಕ್ ಚೈತನ್ಯವಿತ್ತು ಅವಳು ದಣಿವಾರಿಸಿದಳಂತೆ. ಆರಂಭದಲ್ಲಿ ಅನ್ನಪ್ರದಾನಳೆಂದು ಋಷಿಗಳು ನಂಬಿದ ಅವಳು ಯಜ್ಞಪೋಷಕಳೆಂದೂ ತಿಳಿಯಲಾಯಿತು. ಗಾಯತ್ರಿ ಮುಂತಾದ ಏಳು ಛಂದಸ್ಸು ರೂಪಗಳಿಂದ ಸೇರಿದ ಅವಳನ್ನು ಋಷಿಗಳು ವಾಗಧಿ ದೇವತೆಯೆಂದು ಪರಿಗಣಿಸಿ ಅವಳನ್ನು ಒಲಿಸಿ ಅನುಗ್ರಹ ಪಡೆಯುವಲ್ಲಿ ಹೆಚ್ಚು ಆಸಕ್ತರಾದರು. ಅವಳೊಬ್ಬ ಮನೋಚೇತನ ರೂಪಿಣಿಯೆಂಬುದು ಋಷಿಗಳ ಮತವಾಗಿತ್ತು. ಅವಳ ಕೃಪೆಗಾಗಿ ಬ್ರಹ್ಮನೇ ಮೊದಲಾದ ದೇವತೆಗಳು ಅಂಜಲೀಬದ್ಧರಾಗಿ ಸ್ತುತಿಸಿ ಕಾರ್ಯಾರಂಭದಲ್ಲೇ ನಿರ್ವಿಘ್ನತೆಯನ್ನು ಬೇಡಿಕೊಂಡಿದ್ದರು.

ಈ ಯುಗಾರಂಭದಲ್ಲಿ ಮಾನವರನ್ನು ಪೃಥ್ವಿಯಲ್ಲಿ ಬ್ರಹ್ಮ ಸೃಷ್ಟಿಸಿದಾಗ ಅವರಿಗೆ ವಾಕ್‌ಶಕ್ತಿ ಇರಲಿಲ್ಲ. ಅದರಿಂದಾಗಿ ದೇವತೆಗಳನ್ನು ಆಮಂತ್ರಿಸುವುದು ಅವರಿಂದಾಗದೆ ದೇವತೆಗಳಿಗೆ ಹವಿರ್ಭಾಗ ಸಿಗದಾಯಿತು. ಈ ಕೊರತೆಯನ್ನು ನಿವಾರಿಸಲು ಅವರೆಲ್ಲ ಬ್ರಹ್ಮನಲ್ಲಿ ಮೊರೆಯಿಟ್ಟಾಗ ಬ್ರಹ್ಮನು ಸರಸ್ವತಿಯನ್ನು ಪ್ರಸನ್ನೀಕರಿಸಿಕೊಂಡು ಮಾನವರಲ್ಲಿ ಸಗುಣ ಮತ್ತು ನಿರ್ಗುಣವಾದ ಬೀಜಾಕ್ಷರಗಳಿಂದ ಕೂಡಿದ ರೂಪದಲ್ಲಿ ನೆಲೆಸುವಂತೆ ಪ್ರಾರ್ಥಿಸಿದ ಎಂದು ಒಂದು ಕತೆಯಲ್ಲಿ ಬರುತ್ತದೆ.

ಉಪನಿಷತ್ತುಗಳು ರಚನೆಯಾದ ಕಾಲದಲ್ಲಿ ಸರಸ್ವತಿಯು ಒಂದು ಮಹಾ ಶಕ್ತಿಯಾಗಿ ಬೆಳೆದು ತನ್ನದೇ ಆದ ಧ್ಯಾನಶ್ಲೋಕಗಳು ಇರುವ 'ಸರಸ್ವತಿ ರಹಸ್ಯೋಪನಿಷ

ತ್ರಿನ' ರಚನೆಗೆ ಕಾರಣಳಾದಳು. ಅದರಲ್ಲಿ ಅವಳಲ್ಲಿ ಅನಾದಿಯಿಂದ ಅನಂತಕ್ಕೊ ಅವಿನಾಶದಿಂದ ಅದ್ವಿತೀಯಕ್ಕೂ ವೇದಾಂತಗಳ ಅರ್ಥ ತತ್ವಗಳ ಪ್ರತಿರೂಪಕ್ಕೂ ಹೋಲಿಸಿದ್ದಾರೆ. ಭಜಕರ ಮುಕ್ತಿಗೆ ಅವಳೇ ಕಾರಣಳೆಂಬ ವಿಶಿಷ್ಟ ಸ್ಥಾನಕ್ಕೂ ಅವಳನ್ನೇರಿಸಿದ್ದಾರೆ.

ಶುಕ್ಲ ಯಜುರ್ವೇದ ಎಂದು ಖ್ಯಾತವಾಗಿರುವ ಕೃತಿಯನ್ನು ರಚಿಸಿದವರು ಯಾಜ್ಞವಲ್ಕ್ಯರು. ಅವರು ತನ್ನ ಸೋದರಮಾವ ವೈಶಂಪಾಯನರ ಶಿಷ್ಯರಾಗಿದ್ದಾಗ ಯಾವುದೋ ಕಾರಣಕ್ಕಾಗಿ ಅವರಿಬ್ಬರಿಗೂ ಘರ್ಷಣೆಯುಂಟಾಗಿ ತನ್ನಿಂದ ಕಲಿತ ವಿದ್ಯೆಯನ್ನೆಲ್ಲ ಹಿಂತಿರುಗಿಸುವಂತೆ ವೈಶಂಪಾಯನರು ಆಜ್ಞಾಪಿಸಿದರು. ಅದರಿಂದ ಸ್ವಾಭಿಮಾನಿಯಾದ ಯಾಜ್ಞವಲ್ಕ್ಯರು ಆ ವಿದ್ಯೆಗಳನ್ನೆಲ್ಲ ವಾಂತಿ ಮಾಡಿದರು. ಮಾತ್ರವಲ್ಲ, ಅವರಿಗೆ ತಾನು ಕಲಿತ ವಿದ್ಯೆಯನ್ನು ಮೀರಿಸುವಂತಹ ಅದ್ಭುತ ಮಂತ್ರ ಗಳನ್ನು ರಚಿಸುವ ಪ್ರತಿಜ್ಞಾಬದ್ಧರಾಗಿ ಕಾಡು ಸೇರಿ, ತಾವೇ ರಚಿಸಿದ ಸೂಕ್ತಗಳಿಂದ ಸರಸ್ವತಿಯನ್ನು ಧ್ಯಾನಿಸುತ್ತಾ ತಪೋಮಗ್ನರಾದರು. ಅವಳ ಕೃಪೆಯಿಂದ ಅವರ ಇಷ್ಟಾರ್ಥ ಈಡೇರಿ ಶುಕ್ಲ ಯಜುರ್ವೇದ ಉಗಮವಾಯಿತು. ಅದರಲ್ಲಿ ಅವಳನ್ನು ಯಾಜ್ಞವಲ್ಕ್ಯರು ಬ್ರಹ್ಮ ಸ್ವರೂಪ, ಪರಮ ಜ್ಯೋತಿರೂಪ, ಸನಾತನಿ, ಸರ್ವ ವಿದ್ಯಾಧಿ ದೇವಿ, ಜ್ಞಾನಾಧಿ ದೇವಿ, ವಾಣಿಯೆಂದು ವರ್ಣಿಸಿ, ಸರಸ್ವತಿಯ ಕೃಪೆಯಿಲ್ಲ ದಿದ್ದರೆ ಇಡೀ ಜಗತ್ತು ಮೂಕವಾಗುವುದೆಂದೂ ಬದುಕಿದರೂ ಸತ್ತಹಾಗೆಯೇ ಎಂದೂ ಹೇಳಿದ್ದಾರೆ.

ಕುಂಭಕರ್ಣನು ನಿರ್ದೇವತ್ವವನ್ನು ಕೇಳಲು ತಪೋಮಗ್ನನಾಗಿ ಬುದ್ಧಿ ಸ್ಥಾನ ದಲ್ಲಿ ಕುಳಿತ ಸರಸ್ವತಿಯಿಂದಾಗಿ ನಿದ್ರೇವತ್ವವನ್ನು ಕೇಳಿ ನಿದ್ರಾವಶನಾಗುತ್ತಾನೆ. ಈ ಕತೆ ಸರಸ್ವತಿಯ ವಿಶಿಷ್ಟ ಲೀಲಾವಿನೋದಕ್ಕೊಂದು ಸಾಕ್ಷಿ.

ಪುರಾಣಗಳಲ್ಲಿ ಸರಸ್ವತಿ ತಳೆದ ಆಕಾರ ಅಸಂಖ್ಯ ಬಗೆಯಾದರೂ ತಂತ್ರ ಮತ್ತು ಪುರಾಣಗಳಲ್ಲಿ ಆ ಪ್ರಭೇದಗಳು 10 ಮಾತ್ರ ಇವೆ ಎಂಬುದು ತಾರ್ಕಿಕರ ವಿವರಣೆ. ಅವಳು ಜ್ಞಾನ, ಬುದ್ಧಿ ಪ್ರದಾತಳಾದರೂ ಅವಳಿಗೆ ಆಕಾರವಿಲ್ಲವೆಂದು ಬ್ರಹ್ಮವೈವರ್ತ ಪುರಾಣದ ಹೇಳಿಕೆ. ಒಂದು ಕೈಯಲ್ಲಿ ಪುಸ್ತಕ, ಇನ್ನೊಂದರಲ್ಲಿ ಲೇಖನಿ ಹಿಡಿದಿರುವ ಎರಡು ಕೈಗಳ ಸರಸ್ವತಿಯ ಕಲ್ಪನೆ ಒಂದೆಡೆಯಾದರೆ ಉಳಿದ 9 ಪ್ರಭೇದಗಳು 4 ಕೈಗಳಿರುವ ಸರಸ್ವತಿಎದ್ದು. ಈ ನಾಲ್ಕು ಕೈಗಳಲ್ಲಿ ಎರಡರಲ್ಲಿ ವೀಣೆ ಅಲಂಕರಿಸಿದೆ. ಒಂದು ಕೈಯಲ್ಲಿ ಅಕ್ಷರಮಾಲೆ ಪುಸ್ತಕಗಳಾದರೆ ಇನ್ನೊಂದರಲ್ಲಿ ವ್ಯಾಖ್ಯಾನ ಮುದ್ರೆಯೋ ತಾವರೆ ಹೂವೋ ಅಮೃತ ಕಲಶವೋ ಹಿಡಿದಿರುತ್ತದೆ. ಹಂಸವಾಹನೆ ಯಾಗಿ ಇಡೀ ಶರೀರ ಅಕ್ಷರಗಳಿಂದ ಅಲಂಕೃತಳಾದ ಸರಸ್ವತಿಯ ಕಲ್ಪನೆ ಪ್ರಪಂಚ ಸಾರತಂತ್ರದಲ್ಲಿದೆ.

ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಸರಸ್ವತಿಗೆ ನಾಲ್ಕು ಕೈಗಳಿವೆಯೆಂದೂ ಅವಳ ಎಡಭಾಗದ ಎರಡು ಕೈಗಳಲ್ಲಿ ಚಕ್ರ ಮತ್ತು ಕಮಂಡಲವನ್ನೂ ಬಲಭಾಗದ ಕೈಗಳಲ್ಲಿ ಪುಸ್ತಕ ಮತ್ತು ಅಕ್ಷರಗಳ ಮಾಲೆಯನ್ನು ಹಿಡಿದಿರುವಂತೆ ಕಲೆಗಳಲ್ಲಿ ಅವಳನ್ನು ರೂಪಿಸಬೇಕೆಂದೂ ಚಂದ್ರವದನೆಯಾಗಿ, ಸಮಪಾದಗಳಿಂದ ನಿಂತಿರುವವಳಂತಿರಬೇಕೆಂದೂ ತಿಳಿಸಿದೆ. (ಪುರಾಣಗಳಲ್ಲಿ ಒಂದು ರೀತಿಯಾದರೆ ಆಗಮ, ತಂತ್ರ, ಶಿಲ್ಪಗಳು ಹೇಳುವ ಆಕಾರವೇ ವಿಭಿನ್ನ) ಸ್ಕಾಂದ ಪುರಾಣದಲ್ಲಿ ಚತುರ್ಭುಜಳಾದ ಆಕೆ ಈ ಕೈಗಳಲ್ಲಿ ಕಮಂಡಲು, ಜಪಮಾಲೆ, ತಾವರೆ, ಪುಸ್ತಕಗಳನ್ನು ಹಿಡಿದಿದ್ದಾಳೆಂದು ಭಜಕರ ನಾಲಗೆಯಲ್ಲಿ ನುಡಿಗಳಾಗಿ, ಕಣ್ಣುಗಳಲ್ಲಿ ತೇಜಸ್ಸಾಗಿ ನೆಲೆಸಿದ್ದಾಳೆಂದೂ ರೋಹಿಣಿ, ಗೌರಿ, ಬ್ರಹ್ಮಾಣಿ, ಲಕ್ಷ್ಮಿ ಎಂಬ ಹೆಸರುಗಳೂ ಅವಳದೆಂದು ಉಕ್ತವಾಗಿದೆ. ಜ್ಞಾನಿಗಳನ್ನು ರಕ್ಷಿಸುವುದಕ್ಕಾಗಿ ಧರ್ಮ ಎಂಬ ಅರಣ್ಯದಲ್ಲಿ ಬ್ರಹ್ಮ ತನ್ನ ಮಗಳಾದ ಸರಸ್ವತಿಯನ್ನು ನೆಲೆಗೊಳಿಸಿದಾಗ ಆಕೆ ಆಭರಣಗಳಿಂದ ಅಲಂಕೃತಳಾಗಿ ಕೈಗಳಲ್ಲಿ ಜಪಸರ, ಕಮಂಡಲು ಹಿಡಿದು ಜ್ಞಾನ ಕ್ಷೇತ್ರವನ್ನು ಬಾಧಿಸಿದ (ಅಜ್ಞಾನವೆಂಬ) ರಾಕ್ಷಸರನ್ನು ಕೊಂದಳು. ಆ ಕಾಲದಲ್ಲಿ ಆಕೆಗೆ 10 ತೋಳು, 5 ಮುಖಗಳಿದ್ದವೆಂದೂ ಸ್ಕಾಂಧ ಪುರಾಣ ಹೇಳಿದೆ.

ಇನ್ನೊಂದೆಡೆ ಚಂದ್ರಶೇಖರಳೆಂದು ಸರಸ್ವತಿಯನ್ನು ಕರೆದು ಕಾರ್ಯಾರಂಭದಲ್ಲಿ ವಿಘ್ನ ನಿವಾರಕವಾಗಿ ಅವಳನ್ನು ನೆನೆಯುವ ಅಗತ್ಯವನ್ನು ಒತ್ತಿ ಹೇಳಲಾಗಿದೆ. ವೀಣಾಪಾಣಿ, ವಿದ್ಯಾಮಾತೆ, ಕಮಂಡಲು, ಪುಸ್ತಕಧಾರಿಣಿಯಾಗಿ ಭವಿಷ್ಯ ಪುರಾಣ ಚಿತ್ರಿಸಿರುವ ಸರಸ್ವತಿ ವಿದ್ಯಾಮಾತೆಯಷ್ಟೇ ಅಲ್ಲ ಸರ್ವ ರಕ್ಷಕಳೆಂದೇ ವರ್ಣಿಸಿದೆ. ಅವಳನ್ನು ಪದ್ಮಾಸನಸ್ಥೆಯೆಂದೂ ವಿದ್ಯಾಕಮಲ ಲೋಚನೆಯೆಂದು ವಿಶ್ವರೂಪದ ವಿಶಾಲಾಕ್ಷಿಯೆಂದೂ ಹೊಗಳಿದೆ. ಜ್ಞಾನ, ಬುದ್ಧಿ ಪ್ರದಾಯಕಳಾದ ಸತ್ವಗುಣ ಪ್ರಧಾನ ದೇವತೆ ಅವಳಾಗಿದ್ದು ಅವಳಿಗೆ ಆಕಾರವೇ ಇಲ್ಲವೆಂಬುದು ದುರ್ಗಾ ಸಪ್ತಶತಿಯ ವಾದ. ಶ್ವೇತವರ್ಣಳಾಗಿ ಶ್ವೇತಕಮಲದ ಮೇಲೆ ಕುಳಿತಿರುವ ಸರಸ್ವತಿಯನ್ನು ಅಗ್ನಿಪುರಾಣ ಕಲ್ಪಿಸಿದೆ.

ಪಾಂಚರಾತ್ರಾಗಮವು ಸರಸ್ವತಿಗೆ 3 ಕಣ್ಣುಗಳಿವೆಯೆಂದು ಪ್ರತಿಪಾದಿಸಿದೆ. ಶಿಲ್ಪಶಾಸ್ತ್ರದಲ್ಲಿ 6 ಕೈಗಳಿರುವ ಸರಸ್ವತೀ ರೂಪವನ್ನು ಕಲ್ಪಿಸಲಾಗಿದೆ. ಈ ಕೈಗಳಲ್ಲಿ ವೀಣೆ, ಪುಸ್ತಕ, ಸರಗಳೊಂದಿಗೆ ಪಾಶ, ಅಂಕುಶಗಳನ್ನೂ ಧರಿಸಿರುವುದೊಂದು ವಿಶೇಷ. ಎಂಟು ಕೈಗಳಿರುವ ವಿಗ್ರಹಗಳನ್ನು ಪ್ರಾಚೀನ ಶಿಲ್ಪಶಾಸ್ತ್ರಜ್ಞರು ರಚಿಸಿದ್ದರು. ಈ ಆಕರ್ಷಣೀಯವಾದ ಸುಂದರ ವಿಗ್ರಹಗಳು ನಾಟ್ಯಭಂಗಿಯಲ್ಲಿದ್ದು ಪಾಶ, ಮುದ್ರೆ, ಹೂವಿನ ಬಳ್ಳಿ, ಫಲಗಳನ್ನು ಹಿಡಿದಿರುವುದು ಕಾಣಬರುತ್ತದೆ. ಶಿಲ್ಪಗಳಲ್ಲೇ ವಿಶಿಷ್ಟವೆನಿಸಿರುವ ಧೇನು ವಾಗೀಶ್ವರಿ ಪ್ರಭೇದದಲ್ಲಿ ಸರಸ್ವತಿ ಪದ್ಮಾಸೀನಳಾಗಿ ಎರಡು

ಕೈಗಳಲ್ಲಿ ಪಾಶ ಅಂಕುಶಗಳನ್ನೂ ಪುಸ್ತಕ ಸರಗಳನ್ನೂ ಧರಿಸಿರುತ್ತಾಳೆ. ಕರ್ನಾಟಕದ ಪ್ರಸಿದ್ಧ ಕ್ಷೇತ್ರಗಳ ಶಿಲ್ಪಿಗಳು ಅವಳ ವಿವಿಧ ಭಾವಭಂಗಿಗಳನ್ನು ತಂತ್ರಾಗಮಕ್ಕನು ಸಾರವಾಗಿ ಕೆತ್ತಿದ್ದಾರೆ. ಹೊಯ್ಸಳ ದೇವಾಲಯಗಳಂತೂ ಆಕರ್ಷಣೀಯ ಕೆತ್ತನೆಗಳ ಗಾಗಿ ಪ್ರಸಿದ್ಧ. ಹಳೇಬೀಡಿನಲ್ಲಿರುವ ಆರು ಕೈಗಳ ಸರಸ್ವತೀ ಶಿಲ್ಪದಲ್ಲಿ ಆಕೆ ತನ್ನ ಬಲಗಾಲನ್ನು ಪೀಠದಲ್ಲಿ ಮಡಚಿಟ್ಟು ಎಡಗಾಲನ್ನು ಕೆಳಗೆ ಇಳಿಬಿಟ್ಟು ವೀಣಾಪಾಣಿ ಯಾಗಿ ಕುಳಿತ ಭಂಗಿ ಮೋಹಕವಾದುದು. ಇದರ ನಾಲ್ಕು ಕೈಗಳಲ್ಲಿ ಪಾಶ, ಅಕ್ಷ ಮಾಲೆ, ಫಲ, ಹೂಬಳ್ಳಿಗಳಿವೆ. ಪದ್ಮಾಸನಸ್ಥೆಯಾಗಿಯೂ ಕೆಲವೆಡೆ ಅವಳನ್ನು ರೂಪಿಸಲಾಗಿದೆ.

ಕೆಲವೆಡೆ ಸರಸ್ವತಿಯನ್ನು ಮಯೂರವಾಹನೆಯಾಗಿ ಚಿತ್ರಿಸಿದ್ದರೆ ಇನ್ನು ಕೆಲ ವೆಡೆ ಹಂಸದ ಮೇಲೆ ಕುಳಿತಿರುವಂತೆ ನಿರೂಪಿಸಿರುವುದೂ ಕಂಡುಬರುತ್ತದೆ. ಶಾಕ್ತ ಕರು ಅವಳು ಹಂಸವಾಹನೆಯೇ ಸರಿ: ಮಯೂರದ ಮೇಲೆ ಅವಳನ್ನೇರಿಸಿದವರು ಜೈನ ಕವಿಗಳೆಂದು ವಾದಿಸುತ್ತಾರೆ. ಆದರೆ ಒಂದು ವಿಚಾರ; ಯಮುನಾ ನದಿಯಲ್ಲಿ ಆನೆಗಳು ಹೆಚ್ಚಾಗಿದ್ದುದರಿಂದ ಯಮುನಾ ದೇವಿಗೆ ಆನೆ ವಾಹನ. ಗಂಗಾನದಿ ಮೊಸಳೆಗಳಿಗೆ ಪ್ರಸಿದ್ಧವಾದ ಕಾರಣದಿಂದ ಗಂಗೆ ಆಸೀನಳಾಗಿರುವುದು ಮೊಸಳೆಯ ಮೇಲೆ. ಅಂತೆಯೇ ಸರಸ್ವತೀ ನದಿತಟಾಕ ಹಂಸ ಮತ್ತು ನವಿಲುಗಳಿಗೆ ತವರೂರು. ಈ ಕಾರಣದಿಂದ ಅವಳಿಗೆ ಅವೆರಡೂ ಪಕ್ಷಿಗಳು ವಾಹನವಾದುದು ಅಸಂಭಾವ್ಯವೇನೂ ಅಲ್ಲ.

ಸರಸ್ವತಿಯನ್ನು ಶೈವಶಕ್ತಿಯ ಪ್ರತೀಕವಾಗಿಯೂ ಆರಾಧಿಸಲಾಗಿದೆ. ಶರ ದೃತುವಿನ ನವಮಿ ತಿಥಿ ಸರಸ್ವತಿಯ ಆರಾಧನೆಗೆ ಅಗತ್ಯವಾದ ಅವಳಿಗೆ ಪ್ರಿಯವಾದ ದಿನ. ಈ ಕಾರಣದಿಂದ ಆಕೆ ಶಾರದಾ ಎಂಬ ಹೆಸರಿನಿಂದ ಲೋಕ ವಿಖ್ಯಾತಳಾದ ಳಂತೆ. 'ಇಂದಿರಾ ರಮಣನ ಹಿರಿಯ ಸೊಸೆಯು ನೀನು ಬಂದೆನ್ನ ವದನದಿ ನಿಂದು ಜ್ಞಾನವ ತೋರು' ಎಂದು ದಾಸರ ಸ್ತುತಿಗೊಲಿದು ನಮ್ಮನ್ನು ಕರುಣಿಸುವ ಶಾರದೆಯ ಒಲವಿಗೆ ಪಾತ್ರರಾದವರೇ ಧನ್ಯರಲ್ಲವೆ!

ಹೀಗೆ ಜಗದ ಜನರಿಗೆ ಜ್ಞಾನದ ಸಂಕೇತವಾಗಿರುವ ಸರಸ್ವತಿ ಎಂಬ ಪದ ಋಷಿ ಮುನಿಗಳ ಕಲ್ಪನೆಯ ಕೂಸೇ ಆಗಿರಬಹುದು, ಆದರೆ ಆ ಹೆಸರಿನಲ್ಲಿ ಅವರು ತುಂಬಿ ರುವ ಅಗಾಧ ಶಕ್ತಿಯಂತೂ ಕತ್ತಲೆಯ ಮಾರ್ಗದಲ್ಲಿ ಒಂದು ದಿವ್ಯ ಜ್ಯೋತಿ ಯೆಂಬುದು ನಿಸ್ಸಂದೇಹ.

# ನೀತಿಯೇ ಮಾನವನ ಜೀವಾಳ

—ಪ್ಹಿ. ಸಿ. ಅಂದಾನಿ, ಗೋಕಾಕ.

ಮಾನವನ ಸರ್ವತೋಮುಖ ಪ್ರಗತಿಗೆ ನೀತಿಯೇ ನೆಲೆಗಟ್ಟು. ಸಮಾಜ ಜೀವಿಯಾದ ಮಾನವನು ತಾನು ಸುಖಿಯಾಗಿ ಬಾಳಿ ತನ್ನ ಜೀವನವನ್ನು ಸಾರ್ಥಕ ಜೀವನವನ್ನಾಗಿ ಮಾಡಿಕೊಳ್ಳಲಿಕ್ಕೆ ಹಾಕಿಕೊಂಡ ಅಚ್ಚುಕಟ್ಟಾದ ಕಟ್ಟುನಿಟ್ಟಾದ ಧರ್ಮಯುಕ್ತವಾದ ಕಟ್ಟಳೆಗಳೇ ನೀತಿ. ಘನತರವಾದ ಆದರ್ಶಮಯ ಜೀವನವನ್ನು ಸಾಧಿಸಿ ಉಳಿದವರ ಬಾಳಿಗೆ ಬೆಳಕನ್ನು ನೀಡಬಲ್ಲ ನೈತಿಕ ಮನುಷ್ಯನಿಗೆ ಸಮಾಜದಲ್ಲಿ ಭದ್ರವಾದ ಮಾನ, ಮರ್ಯಾದೆ, ಗೌರವ, ಸದ್ಭಾವನೆಗಳಿರುತ್ತವೆ. ಮಾನವೀಯತೆಯ ಎಲ್ಲ ಘಟಕಗಳನ್ನು ಮೈಗೂಡಿಸಿಕೊಂಡವನು ಇಹ ಜೀವನದಲ್ಲಿಯೇ ಪರಸುಖದ ಅನುಭವವನ್ನು ಪಡೆಯಬಲ್ಲ. ಒಳ್ಳೇ ಆಲೋಚನೆ ಒಳ್ಳೇ ಮಾತು ಒಳ್ಳೇ ನಡತೆಗಳಿಂದ ಕೂಡಿದ ಮನುಷ್ಯ ಮಾನವನಾಗಿ ಮಹಾನುಭಾವನಾಗಬಲ್ಲ. ಸಮಾಜದ ಆಂತರಿಕ ಹಾಗೂ ಬಾಹ್ಯ ಶುದ್ಧಿಗೆ ಮತ್ತು ಅವುಗಳ ಬೆಳವಣಿಗೆಗೆ ನೀತಿ ಧರ್ಮಗಳೇ ತಳಹದಿ. ವ್ಯಕ್ತಿಗೆ ಆರೋಗ್ಯ ಸಂಪತ್ತಾದರೆ ದೇಶಕ್ಕೆ ನೀತಿವಂತ ವ್ಯಕ್ತಿಗಳೇ ಹಿರಿದಾದ ಸಂಪತ್ತು. ನೀತಿಯನ್ನು ಕಳೆದುಕೊಂಡ ಮನುಷ್ಯನು ವಾಸನೆಯಿಲ್ಲದ ಪುಷ್ಪದಂತೆ, ದೇವರಿಲ್ಲದ ಗುಡಿಯಂತೆ, ಗುರುವಿಲ್ಲದ ಮಠದಂತೆ, ತಂತಿ ಹರಿದ ವೀಣೆಯಂತೆ, ನಿರುಪಯುಕ್ತನಾಗುವನು. ಶರೀರವು ನಿರೋಗಿಯಾಗಬೇಕಾದರೆ ಶುದ್ಧವಾದ ರಕ್ತದ ಅವಶ್ಯಕತೆ ಎಷ್ಟು ಇರುವದೋ ಅದೇ ಪ್ರಕಾರ ಮಾನವ ಜನ್ಮದ ಸಫಲತೆಯನ್ನು ಮಾಡಿಕೊಳ್ಳಬೇಕಾದರೆ ಅಷ್ಟೇ ನೀತಿನಡುವಳಿಕೆಗಳ ಅವಶ್ಯವಿರುವದು. ಮಾನವನ ನಿತ್ಯ ಜೀವನದಲ್ಲಿ ಸುಖ, ಶಾಂತಿ, ಮಾನ, ಮರ್ಯಾದೆ, ಪ್ರಶಂಸೆ, ಕೀರ್ತಿ, ಸಂಪತ್ತು, ಜಯ, ಶ್ರೇಯಸ್ಸು, ಸಜ್ಜನಿಕೆಯನ್ನು ತಂದೀಯಲಿಕ್ಕೆ ನೀತಿಯೇ ಕಾರಣ. ಜೀವನವೆಂಬ ಗಾಡಿಯು ಸುಗಮವಾಗಿ ಸಾಗಬೇಕಾದರೆ ನೀತಿ-ಧರ್ಮಗಳೆಂಬ ಎರಡು ಗಾಲಿಗಳ ಅವಶ್ಯವಿದೆ. ಚಕ್ರೋಪಾಧಿಯಲ್ಲಿರುವ ಧರ್ಮ-ನೀತಿಗಳನ್ನು ನಮ್ಮಿಂದ ದೂರೀಕರಿಸಿದರೆ ಜೀವನದಲ್ಲಿ ನಮ್ಮಷ್ಟಕ್ಕೆ ನಾವೇ ದುರ್ಘಟನೆಗಳನ್ನು ತಂದುಕೊಂಡಂತಾಗುವದು. ರೋಗದ ಅಂಜಿಕೆಯಿಲ್ಲದಿರಬೇಕಾದರೆ ಊಟ ಬಲ್ಲವನಾಗಬೇಕು, ಜಗಳದ ಅಂಜಿಕೆಯಿಲ್ಲದಿರಬೇಕಾದರೆ ಮಾತು ಬಲ್ಲವನಾಗಬೇಕು. ಬಡತನದ ಅಂಜಿಕೆಯಿಲ್ಲದಿರಬೇಕಾದರೆ ಕಾಯಕದಲ್ಲಿ ನಿರತನಾಗಿರಬೇಕು. ಅಂತಾ ಜನಸಾಮಾನ್ಯರಿಗೆ ಇವು ನೀತಿಕಾರರು ಹೇಳಿದ ನೀತಿಪರ ಮಾತುಗಳು.

ಇಂದಿನ ಸಮಾಜದಲ್ಲಿ ಸಾಮಾಜಿಕ ಜೀವನದ ನೈತಿಕ ಮತ್ತೆಯು ಮರ್ಯಾದೆ
ಕೆಳಮಟ್ಟಕ್ಕಿಳಿದು ತಾವು ಮಾಡಿದ ಅನಾಚಾರ, ದುರಾಚಾರ, ಅತ್ಯಾಚಾರ, ಭ್ರಷ್ಟಾ
ಚಾರ ಮೊದಲಾದ ಪಾಪ ಕೃತ್ಯಗಳನ್ನು ಬಚ್ಚಿಟ್ಟು ತೋರಿಕೆಗೆ ಪುಣ್ಯದ ಕಾರ್ಯ
ಗಳನ್ನು ಮಾಡಿದೆಂಬುದನ್ನು ಪ್ರಕಟಿಸಿ ಅದರಿಂದ ಪರಮಾವಧಿ ಲಾಭದ ಸಫಲತೆ
ಯಾದರೆ ಆ ಸಫಲತೆಯ ಮೆರುಗಿನಲ್ಲಿ ಪಾಪದ ಕಾರ್ಯಗಳನ್ನಷ್ಟೇ ಮಾಡುತ್ತಾರೆ.
ಇಂಥ ಕಾರ್ಯಗಳನ್ನು ಮಾಡುವ ಸಮಾಜನವನ್ನು ನೈತಿಕ ಶಕ್ತಿಯೊಂದೇ ಅಧೋ
ಗತಿಯಿಂದ ಮೇಲಕ್ಕೆತ್ತಬಲ್ಲದು. ಇನ್ನು ಎಷ್ಟೋ ಜನರು ಅನೀತಿಯಿಂದ ಅವ್ಯವ
ಹಾರ, ಮೋಸ, ಕಳ್ಳಸಂತೆ ಇನ್ನಿತರ ಅಕ್ರಮ ಮಾರ್ಗಗಳಿಂದ ಹಣವನ್ನು ಸಂಪಾದಿಸಿ
ಮಾಡಿದ ಪಾಪವನ್ನು ಕಳೆದುಕೊಳ್ಳಲಿಕ್ಕೆ ದೇವಸ್ಥಾನಗಳಿಗೆ ಹಾಗೂ ಇನ್ನಿತರ
ಪರೋಪಕಾರಕ್ಕೆಂದು ಹೇಳಿ ಹಣವನ್ನು ಕೊಟ್ಟು ಸಂಪಾದನೆಯ ಸದ್ವಿನಿಯೋಗಮಾಡಿ
ಕೊಳ್ಳುವರು. ಸಮಾಜ ಸುಧಾರಕರೆಂದೆನಿಸಿಕೊಳ್ಳುವ ಹಲವರು ಧಾರ್ಮಿಕ ಕೆಲಸ
ಕ್ಕೆಂದು ಹೇಳಿ ನಂಬಿದ ಭಕ್ತರಿಂದ ಹಣವನ್ನು ದೊರಕಿಸಿ ತಮ್ಮ ಸ್ವಾರ್ಥಕ್ಕೆ ಉಪ
ಯೋಗಿಸಿಕೊಳ್ಳುವರು. ಕೆಲವರು ಮೇಯಲಿಕ್ಕೆ ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳು
ವರು. ಇಂಥವರೆಲ್ಲ ಭೌತಿಕ ನ್ಯಾಯಾಲಯದ ಶಿಕ್ಷೆಯಿಂದ ತಪ್ಪಿಸಿಕೊಂಡರೂ ಧರ್ಮ
ನ್ಯಾಯಾಲಯದ ಅಧಿಪತಿಯಾದ ಧರ್ಮರಾಜನ ಉಗ್ರ ಶಿಕ್ಷೆಯಿಂದ ಎಂದೂ ತಪ್ಪಿಸಿ
ಕೊಳ್ಳಲಾರರು.

ಸಾಕಷ್ಟು ದುಡ್ಡಿದ್ದವರು ದೊಡ್ಡವರಲ್ಲ, ಎಂಥ ದೊಡ್ಡ ಅಧಿಕಾರದಲ್ಲಿದ್ದರು
ಅವರು ದೊಡ್ಡವರಲ್ಲ, ಹಲ್ಲು ಬಿದ್ದು ಗಡ್ಡ ಬೆಳ್ಳಗಾಗಿ ಮುಪ್ಪಾವಸ್ಥೆಯನ್ನು ಹೊಂದಿ
ದವರು ದೊಡ್ಡವರಲ್ಲ, ಬಹು ಮಂದಿ ಬಂಧುಬಳಗದವರಿದ್ದವರು ದೊಡ್ಡವರಲ್ಲ, ರಾಜ
ಕೀಯದಲ್ಲಿ ನೈಪುಣ್ಯತೆಯನ್ನು ಹೊಂದಿರುವವರು ದೊಡ್ಡವರಲ್ಲ, ಕಾಯಿದೆಯಲ್ಲಿ
ಪಂಡಿತರಾದವರು ದೊಡ್ಡವರಲ್ಲ. ಆದರೆ ಸದ್ಗುಣ, ಸದಾಚಾರ, ಸದ್ವಿವೇಕ, ಸತ್
ಕ್ರಿಯೆ, ಸಮ್ಯಕ್‌ಜ್ಞಾನ, ಸವಿನಯ, ಸಮತಾಭಾವ, ಸಹಕಾರಿ ಮನೋಧರ್ಮವುಳ್ಳ
ವರೆ ದೊಡ್ಡವರು. ನೀತಿ ಬಿಟ್ಟು ಭ್ರಷ್ಟರಾಗಿದ್ದರೆ ಯಾವದರಲ್ಲಿಯೂ ಎಷ್ಟೇ ದೊಡ್ಡವ
ರಾಗಿದ್ದರೂ ಅವರನ್ನು ಗೌರವಿಸುವದು ಒಳ್ಳೆಯದಲ್ಲ. ಯಾಕೆಂದರೆ ಅನೈತಿಕತೆಯಿಂದ
ಅವರು ಪಡೆದುಕೊಂಡ ಕುರ್ಚಿಗಳ ಬಲದಿಂದ ಮತ್ತು ಹೆದರಿಕೆಯಿಂದ ಅವರನ್ನು
ಗೌರವಿಸಿದರೆ ಇದರ ದುರುಪಯೋಗವನ್ನು ಪಡೆದುಕೊಂಡು ಇನ್ನೂ ಹೆಚ್ಚಿಗೆ
ದುರ್ಮಾರ್ಗದಲ್ಲಿ ಪ್ರವೀಣತೆಯನ್ನು ಹೊಂದಿ ಇಡೀ ಸಮಾಜವನ್ನು ಹಾಳುಮಾಡುವ
ದಲ್ಲದೆ ಸಮೃದ್ಧ ರಾಷ್ಟ್ರವನ್ನೂ ಸಹ ಹಾಳು ಮಾಡುವದರಲ್ಲಿ ಸಂದೇಹವಿಲ್ಲ. ಇದು
ಅಲ್ಲದೆ ಅವರಿಗೆ ವಂಚಿಸಲಿಕ್ಕೆ ಅವಕಾಶಮಾಡಿಕೊಟ್ಟಂತಾಗುವದು. ನೀತಿ ನಿಯಮ
ಗಳ ಬೇಲಿ ಇಲ್ಲದೇ ಸಮಾಜ ಜೀವನವೇ ಅಸಾಧ್ಯ. ಇಂದಿನ ವಿದ್ಯಾರ್ಥಿಗಳ ಮನೋ
ವೃತ್ತಿಯನ್ನು ತೀಕ್ಷ್ಣವಾಗಿ ಅವಲೋಕಿಸಿದಾಗ ನಮಗೆ ಕಂಡುಬರುವ ದಾರುಣ ಪರಿ

ಸ್ಥಿತಿಯೇನಂದರೆ ನಮ್ಮ ಪುರ್ಢಾರಿಗಳು ತುಳಿದ ದಾರಿಯನ್ನೇ ಈ ನಮ್ಮ ವಿದ್ಯಾರ್ಥಿಗಳ ತುಳಿಯುತ್ತಿದ್ದಾರೆ. ಇದಕ್ಕೆ ನಿದರ್ಶನವೇನೆಂದರೆ–ಇಂದು ನಡೆಯುತ್ತಿರುವ ವಿದ್ಯಾರ್ಥಿ ಸಂಘದ ಚುನಾವಣೆಗಳು ಸಾರ್ವತ್ರಿಕ ಚುನಾವಣೆಗಳಿಗಿಂತಲ್ಲಿ ಒಂದು ಹೆಜ್ಜೆ ಮುಂದ ಇರುವದನ್ನು ಕಣ್ಣಾರೆ ಕಂಡಾಗ ವಿದ್ಯಾರ್ಥಿಗಳ ಕಲ್ಯಾಣ ಬಯಸುವ ಪ್ರತಿಯೊಬ್ಬ ರಿಗೂ ಸಂಕಟವಾಗದೆ ಇರದು. ಕಾಲೇಜು ಚುನಾವಣೆಗಳಲ್ಲಿ ತಮ್ಮ ದುಶ್ಚಟಗಳನ್ನು ತೋರಿಸಿಕೊಳ್ಳಲು ಮಿತಿಮೀರಿದ ಹಣವನ್ನು ಉಪಯೋಗಿಸಿಕೊಂಡು ಇಂದಿನ ವಿದ್ಯಾರ್ಥಿಗಳು ಅಕ್ಷರಶಃ ವಿದ್ಯಾರ್ಜನೆಯನ್ನು ಮರೆತು ಈ ರೀತಿ ಅಡ್ಡದಾರಿ ಹಿಡಿಯು ತ್ತಿರುವದನ್ನು ಕಣ್ಣಾರೆ ಕಂಡು ಸುಮ್ಮನಿರದೆ ಹಿರಿಯರಾದವರು, ಮೇಲಾಧಿಕಾರಿಗಳು ವಿದ್ಯಾರ್ಥಿಗಳ ನೈತಿಕ ಅಧಃಪತನವನ್ನು ತಪ್ಪಿಸಲು ಯೋಗ್ಯಕ್ರಮವನ್ನು ತೆಗೆದುಕೊಳ್ಳು ವದು ಅವಶ್ಯವೆನಿಸುವದು. ಸಾರ್ವಜನಿಕ ಜೀವನದ ನೈತಿಕ ಮೌಲ್ಯಗಳು ಅಧಃಪತನ ಹೊಂದಿ ರಾಷ್ಟ್ರದಲ್ಲಿ ಚಾರಿತ್ರಿಕ ಬಿಕ್ಕಟ್ಟನ್ನು ನಿರ್ಮಿಸಿದೆ. ಕೇವಲ ಕಾಯಿದೆ ಕಾನೂನುಗಳಿಂದ ಉಚ್ಚಮಟ್ಟದ ಚಾರಿತ್ರ ನಿರ್ಮಾಣವಾಗುವದು ಅಸಾಧ್ಯ. ನೈತಿಕ ಮೌಲ್ಯಗಳಿಗೆ ಸಮಾಜದಲ್ಲಿ ಬೆಲೆ ಕಡಿಮೆಯಾಗುತ್ತಿರುವದು ರಾಷ್ಟ್ರದ ಹಿತದ ದೃಷ್ಟಿ ಯಿಂದ ಒಳ್ಳೆಯದಲ್ಲ. ಭದ್ರವಾದ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳ ಮೂಲವೆಲ್ಲ ಮಾನವನ ಒಳ್ಳೆ ಸ್ವಭಾವ ಹಾಗೂ ನೈತಿಕತೆಯ ಮೇಲೆ ನಿಂತಿದೆ ಸಮಾಜದಲ್ಲಿಯ ವ್ಯಕ್ತಿಗಳು ನೀತಿವಂತರಾಗಿದ್ದರೆ ಅಂಥ ಸಮಾಜ ಅಥವಾ ರಾಷ್ಟ್ರ ಸಂಪತ್ತು ಶರೀರನ ಯಾವ ಸಮಾಜವನ್ನೂ ರಾಷ್ಟ್ರವನ್ನೂ ಸುಖಿಯನ್ನಾಗಿ ಮಾಡುವು ದಿಲ್ಲ. ಆದರೆ ಆ ಸಮಾಜದ ನೀತಿಮತ್ತೆಯೇ ಅದನ್ನು ಸುಖಿಯಾಗಿ ಸಮೃದ್ಧಿಯಾಗಿ ಮಾಡುವದು. ಕುಸಿಯುತ್ತಿರುವ ಸಮಾಜವನ್ನು ಉತ್ತಿ ಹಿಡಿಯಲು ವ್ಯಕ್ತಿಗಳು ಪಕ್ಷ ಪಂಗಡಗಳು ಪ್ರಾಮಾಣಿಕತೆಯನ್ನು ರೂಢಿಸಿಕೊಳ್ಳುವದು ಅವಶ್ಯ. ಮನುಷ್ಯನಾದ ವನು ಸರಿಯಾದ ನೈತಿಕ ಮೌಲ್ಯವನ್ನಳೆಯುವ ಶಿಕ್ಷಣ ಪಡೆಯದಿದ್ದರೆ ಅವನು ಮನುಷ್ಯನೆನಿಸಿಕೊಳ್ಳಲಾರನು. ನೈತಿಕ ಬಲವುಳ್ಳ ವ್ಯಕ್ತಿಗಳು ಮುಂದಾಳುತನದಲ್ಲಿ ಬಾರದ ಹೊರತು ಸಮಾಜ ಕಲ್ಯಾಣವನ್ನು ಸಾಧಿಸುವದು ಅಸಾಧ್ಯವೆನಿಸುವದು ಮಕ್ಕಳಲ್ಲಿರುವ ಸ್ವಾಭಾವಿಕವಾಗಿರುವ ಸದ್ಗುಣಗಳು ಪೂರ್ಣ ವಿಕಾಸ ಹೊಂದುವ ನೈತಿಕ ಶಿಕ್ಷಣವನ್ನು ಕೊಟ್ಟರೆ ಮಕ್ಕಳ ಜೀವನ ಧಾರ್ಮಿಕ, ಆಧ್ಯಾತ್ಮಿಕ ಅಭಿಮುಖ ವಾಗಿ ಸಾಗಿ ಅವರಲ್ಲಿ ಸಮೃದ್ಧ ರಾಷ್ಟ್ರವನ್ನು ಕಟ್ಟುವ ಸಾಮರ್ಥ್ಯವು ಒದಗುವದರಲ್ಲಿ ಯಾವ ಸಂದೇಹವಿಲ್ಲ. ಶಿಕ್ಷಣ ಕೊಡುವ ಉದ್ದೇಶವು ಕೇವಲ ಮಕ್ಕಳನ್ನು ಸಾಕ್ಷರ ಗಳನ್ನಾಗಿ ಮಾಡುವದಾಗಿರದೆ ತಮ್ಮ ತಮ್ಮ ಉದ್ಯೋಗ ವ್ಯವಸಾಯದಲ್ಲಿ ತಜ್ಞತೆ ಯನ್ನು ಹೊಂದುವ ಮತ್ತು ಸಚ್ಚಾರಿತ್ರವಂತರನ್ನಾಗಿಯೂ, ನೈತಿಕ ಧಾರ್ಮಿಕ ಮನೋಭಾವನೆಯನ್ನು ತರುವ ಉದ್ದೇಶವುಳ್ಳದ್ದಾದರೆ ಅದುವೇ ಯೋಗ್ಯ ಶಿಕ್ಷಣವು ಇಂಥ ನೈತಿಕ ತತ್ವ ಸಿದ್ಧಾಂತದ ನೆರಳಿನಲ್ಲಿ ನೆಲೆಗೊಂಡವರ ಜೀವನವೇ ಧನ್ಯ.

# ತಳಿರು-ತೋರಣ

(ಸಾಮಾಜಿಕ ಕಿರು ಕಾದಂಬರಿ)

—ಎನ್. ಎಸ್. ಗದಗಕರ

ಶನಿವಾರ ಪೇಟೆ, ನವಲೂರು ಅಗಸಿ, ಧಾರವಾಡ.

## (ದ್ವಿತೀಯ ಕಾಂಡ)

ಭದ್ರಗಿರಿಯಲ್ಲಿ ಶ್ರೀಕಾಂತನ ಕಾಲೇಜು ಶಿಕ್ಷಣವು ರಂಜಕ ರೀತಿಯಲ್ಲಿ ಸಾಗಿತು. ಅವನೇನು ಅಂತಹ ಸ್ಕಾಲರ್ ಆಗಿರಲಿಲ್ಲ. ಆದರೆ ಮನಮುಟ್ಟಿ ಓದುವ ಚಟ ಮೈಗೂಡಿಸಿಕೊಂಡಿದ್ದನು. ಅವನ ವೇಷ ಭೂಷಣಗಳಿಗೆ ಪಾಶ್ಚಿಮಾತ್ಯತೆಯ ವಿಲಾಸದ ಝಳುಕು ಎಷ್ಟೂ ಇರಲಿಲ್ಲ. ಅಂತೇ ಒಮ್ಮೆ ಕಾಲೇಜಿನ ಸ್ನೇಹ ಸಮ್ಮೇಲನದ ನಾಟಕಕ್ಕೆ ಅತೀವ "ರಶ್" ಆಗಲು ಹೊರಗಿನವರನ್ನು ತಡೆಯುವ ಪ್ರಸಂಗಬರಲು, ಈ ಹುಡುಗನು ಕಾಲೇಜು ವಿದ್ಯಾರ್ಥಿಯಾಗಿರಲಿಕ್ಕಿಲ್ಲ ಎಂದು ಒಬ್ಬ "ಫಾರಿನ್ ರಿಟೂರ್ಡ್" ಪ್ರೊಫೆಸರರಿಗೆ ಸಂಶಯ ಬಂದು ತಡೆದು ನಿಲ್ಲಿಸಿದರು. ಕಾಲೇಜಿನಲ್ಲಿ ಕಲಿಸುವ ಕೆಲವು ಪ್ರೊಫೆಸರರ ಹೆಸರು, ಅವರು ಕಲಿಸುವ ವಿಷಯವಾಗಿ ಹಲವಾರು ಪ್ರಶ್ನೆಗಳನ್ನು ಕೇಳಿದರು ಆ "ಅಗ್ನಿ ಪರೀಕ್ಷೆ"ಯಲ್ಲಿ ಶ್ರೀಕಾಂತ ಗೆದ್ದನೇನೊ ಸರಿ ಆದರೆ ಕೂಡಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪ್ರೊಫೆಸರರಲ್ಲಿ ಎಂತಹ ಅವಮಾನ! ಪಾಪ! ಅಂದಿನ ಮನರಂಜನೆಯ ಕಾರ್ಯಕಲಾಪಗಳಲ್ಲಿ ಅವನಿಗೆ ಉತ್ಸುಕತೆ ಹಾರಿತು. ಅಲ್ಲದೆ ಮುಂದೆ ಮೂರು ದಿನ ಗೆಳೆಯರಲ್ಲಿ ತಲೆ ಎತ್ತಿ ಆಡ್ಡಾಡಲು ಆಗಲಿಲ್ಲ. ಇವೆಲ್ಲ ಜೀವನದ ಹಲವು ವಿಷಗಳಿಗೆಗಳು ಎಂದು ಸಮಾಧಾನ ಹಚ್ಚಿಕೊಂಡ ಶ್ರೀಕಾಂತ. ಕೊಂಚ ತಾತ್ವಿಕತೆಗೆ ಮಾರುಹೋದ ಏನಿದ್ದರೂ ತಾನು ಇನ್ನು ಸುದೈವಿ ಎಂದು ಮನಸ್ಸಿನಲ್ಲಿ ತಿಳಿದುಕೊಳ್ಳುತ್ತಿದ್ದನು. ಸಿರಿವಂತರ ಮಗನಾದುದಕ್ಕೆ ಇಂತಹ ಭವ್ಯ, ಮನೋಹರ, ಕಾಲೇಜಿನಲ್ಲಿ (ಸರಕಾರಿ) ಕಲಿಯುವ ಭಾಗ್ಯ ಉಂಟಾಯಿತೆಂದು ಹೆಮ್ಮೆ ತವಕ ಪಡುತ್ತಿದ್ದನು.

ಆ ನವಭಾರತ ಕಾಲೇಜು ನಿಜಕ್ಕೂ ಅಂದವಾದುದು. ಹಿಂದೆ ಒಂದು ಕಾಲಕ್ಕೆ ಕಂಪನಿ ಸರಕಾರದ ಆಡಳಿತವಿದ್ದಿರಲು, ರೈಲ್ವೆಯ ವ್ಯವಹಾರಗಳಿಗೆಲ್ಲ ಅದು ಕೇಂದ್ರ ಸಂಸ್ಥೆಯಾಗಿತ್ತು. ಇತ್ತೀಚೆಗೆ ಆ ಕಟ್ಟಡವು ಸರಕಾರಕ್ಕೆ ಹಸ್ತಾಂತರವಾಗಿತ್ತು. ಕಾಲೇಜಿಗಾಗಿ ಅರ್ಧ ಮೈಲಿ ದೂರಿನಿಂದಲೆ ಅವರ ಚರ್ಚಿನೋಪಾದಿ ಕೆಂಪು ಗೋಪುರವು ಕೋಲು ಮಲ್ಲಿಗೆ, ಇತರ ಬಳ್ಳಿಗಳ ಪರಿಸರದಿಂದ ಎಷ್ಟು ರಸಿಕರನ್ನು ಕೈಮಾಡಿ ಕರೆಯುತ್ತಿತ್ತು. ಇಡೀ ಕಟ್ಟಡವು ಸುಣ್ಣ, ಬಣ್ಣ, ಕೆಂಪು, ನೀಲಿ, ಹಸಿರು ಕಾಜುಗಳಿಂದ ಥಳಥಳಿಸುತ್ತಿತ್ತು. ಕೆಂಪು ಇಟ್ಟಿಗೆಯ ಆ ಕಟ್ಟಡಕ್ಕೆ ವಿಲಕ್ಷಣ ಶೋಭೆ ಇದ್ದಿತು. ಕರ್ನಾಟಕದ ಹಲವು ಮುಂದಾಳುಗಳು ಆ ಕಾಲೇಜನ್ನು ಆರಂಭಿಸಲು ೩-೪ ಲಕ್ಷ ರೂಪಾಯಿ ದೇಣಿಗೆ ಕೂಡಿಸಿದ್ದರು. ಸರಕಾರದ ಸಂಸರಿ ಸಹಾಯ ಬೇರೆ!

ಗಣಿತ, ಸೈನ್ಸ ವಿಷಯಗಳಲ್ಲಿ ಆಗ ಆರಂಭದ ದಿಸೆಯಲ್ಲಿ ಪಾಸಾಗಲೇಬೇಕಿತ್ತು. ಅಂತೇ ಶ್ರೀಕಾಂತನು ಒಂದು ವರ್ಷ ಅಲ್ಲಿ ವ್ಯರ್ಥ ಕಳೆದುಕೊಂಡನು. ಕೆಲವರಂತೂ ಆ ಕಾರಣಕ್ಕಾಗಿಯೇ ಕಾಲೇಜು ಬಿಟ್ಟು ಹೋದರು. ಕ್ರಮೇಣ ಶ್ರೀಕಾಂತನಿಗೆ ಅವನ ದ್ವಿತೀಯ ವಿಷಯಗಳು ಬಂದವು. ಅವುಗಳಲ್ಲಿ ಅವನು ಹೇಳಿಕೊಳ್ಳುವಂತಹ ಪ್ರಗತಿಯನ್ನು ಸಾಧಿಸಿದನು. ಅವನದು ಆದಷ್ಟು ಏಕಾಂತ ಜೀವನ, ಆದರೆ ಕಾಲೇಜು ಜೀವನ ಎಂದು ದುಂದುಗಾರಿಕೆ, ಉಡಾಳತನದಲ್ಲಿ ಕಳೆಯಲಿಲ್ಲ. ಕಾಲೇಜು ವಾಚನಾಲಯ, ಗ್ರಂಥ ಭಂಡಾರಗಳ ಸದುಪಯೋಗ ಮಾಡಿಕೊಂಡನು. ಹೀಗೆ ಸಂಸ್ಕೃತ ವಿಷಯವನ್ನು ಮುಖ್ಯವಾಗಿಟ್ಟುಕೊಂಡು ಬಿ ಎ. ಪರೀಕ್ಷೆಯಲ್ಲಿ ಎರಡನೆಯ ತರಗತಿಯಲ್ಲಿ ಉತ್ತೀರ್ಣನಾದನು.

ಗುಡಿಯ ಕಟ್ಟೆಯ ಮೇಲೆ ಶ್ರೀಕಾಂತನು ಪ್ರಸನ್ನಭಾವದಿಂದ ಕುಳಿತಾಗ ಬೇಜಾರು ಮಟ್ಟವಾಯವಾಗಲೆಂದು ಎಲೆ ಅಡಿಕೆ ತಂಬಾಕಿನ ಬಾರು ಮಾಡಿಕೊಂಡನು. ಸಹಜವಾಗಿ ಅವನಿಗೆ ತನ್ನ ಕಾಲೇಜು ವರ್ಗಗಳಿಗೆ ಕಲಿಸುತ್ತಿದ್ದ ಹಲವು ಪ್ರೊಫೆಸರರ ನೆನಪು ಮಿಂಚಿತು. ಒಬ್ಬರು ಉರ್ದು ಪರ್ಶಿಯನ್ ಕಲಿಸುವವರು ಶ್ರೀಕಾಂತ ಆ ವಿಷಯಗಳನ್ನು ತೆಗೆದುಕೊಂಡವನಲ್ಲ. ಆದರೆ ಶಾರೀರಕ ಶಿಕ್ಷಣ ಕಡ್ಡಾಯವಾದುದರಿಂದ ವಿದ್ಯಾರ್ಥಿಗಳೊಡನೆ ಅವನೂ ಆ ಪ್ರೊಫೆಸರರೊಡನೆ "ಕ್ರಾಸ್ ಕಂಟ್ರಿ" (ಗುಡ್ಡ-ಕಂದರ ಅಲೆದಾಟ) ಚಟುವಟಿಕೆಗೆ ಹೋಗುತ್ತಿದ್ದ. ಅವರದು ಆಗಡ ಬಂಬ ಆಕೃತಿ, ಉಳಿದ ವೇಷವೆಲ್ಲ ಪಾಶ್ಚಿಮಾತ್ಯವಾಗಿದ್ದರೂ ಶಿರಸ್ತ್ರಾಣ ಮಾತ್ರ ಗುಲಾಬಿ ಬಣ್ಣದ ಪಾಗೋಟ, ಅದರ ಮೇಲೆ ನೀಲಿ ಚಿಕ್ಕೆ ತುರಾಯಿ ಸಿರಪೇಚು) ಹಣಿಕಿಕ್ಕುತ್ತಿತ್ತು. ಮುಖ ಕೆಂಪುಲಾಲು; ಅವರ ಇಂಗ್ಲೀಷ್ ಶ್ರೀಕಾಂತನ ಮಟ್ಟಿಗೆ ಹೇಳುವದಾದರೆ, ಅಸ್ಖಲಿತ, ಉಜ್ವಲ, ಏರುಮಣೆಯ ಮೇಲೆ ನಿಂತಾಗ ಅವರ ಠೀವಿ ಅಪ್ರತಿಮ. ವಾಗ್ಝರಿ ಜಲಪಾತದಡೆ "ಉಪಕುಲಪತಿಗಳು ಉಪಕುಲಪತಿಗಳಾದುದು ತಮ್ಮ ಅಸಾಧಾರಣ ಯೋಗ್ಯತೆಯಿಂದ ಹಾಗೂ ಹುಚ್ಚಿನಿಂದ" ಎಂದು ಉಗ್ಗಡಿಸಿ ಶಾಲೆಯ ಸ್ನೇಹ ಸಮ್ಮೇಲನದ ಆರಂಭದ ಭಾಷಣದಲ್ಲಿ ಅವರು ಮುಖ್ಯ ಅತಿಥಿಗಳನ್ನು ಕುರಿತು ಹೇಳಿದಾಗ ಆ ರಂಗಿನ ಸರಣಿಗೆ ಶ್ರೋತೃವರ್ಗ ಸಂತೋಷಿಸುತ್ತಿತ್ತು. ಸಾಹೇಬರ ಗೃಹ ಜೀವನ ಅಷ್ಟು ನೆಮ್ಮದಿಯದಿರಲಿಲ್ಲವಂತೆ! ನಿತ್ಯ ಬೀಬಿಯೊಡನೆ ಜಗಳ ಇದ್ದದ್ದೇ. ಹೊರಗೆ ಬಂದಾಗ ಮಾತ್ರ ಪ್ರಸನ್ನ ಮುಖಮುದ್ರೆ, ಸಂಚಾರಕ್ಕೆ ಹೋದಾಗಂತೂ ಅವರ ಉತ್ಸಾಹ ಕೋಡಿಯೊಡೆದು ಹರಿಯುತ್ತಿತ್ತು. ಪ್ರಣಯಕತೆ, ಕಾದಂಬರಿ, ನಾಟಕ ಓದುವ ಹುಚ್ಚು ಬಹಳ. ಅಂತೆ "ನಿಮ್ಮಲ್ಲಿ ಯಾರಾದರೂ ನನಗೆ ಅತೀವ ರೋಮಾಂಚಕ ಕತೆ ಹೇಳಬಲ್ಲಿರಾ?" ಎಂದು ಕೇಳುತ್ತಿದ್ದರು. ಪಾಪ! ಎಷ್ಟು ವಿದ್ಯಾರ್ಥಿಗಳಿಗೆ ಪ್ರಣಯ ಜೀವನ ಗೊತ್ತು? ಇಂತು ನಿರಾಶೆ ಕಟ್ಟಿಟ್ಟದ್ದೆ!

(ಮುಂದುವರಿಯುತ್ತದೆ)

# ಶರಣರು ಮೆಟ್ಟಿದ ಧರೆ-೨

## ಅಥಣಿ ಶಿವಯೋಗಿಗಳು

—ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ

ಸ್ವಾಮಿ ವಿವೇಕಾನಂದರು ಹೇಳುವ ಹಾಗೆ 'ಅರಣ್ಯದಲ್ಲಿ ಯಾರಿಗೂ ಅರಿಯದಂತೆ ತಾನೇ ಅರಳಿದ ಕುಸುಮವು ತನ್ನ ಸುಗಂಧವನ್ನು ಎಲ್ಲೆಡೆಯಲ್ಲಿಯೂ ಬೀಸಿ ತಾನಾಗಿಯೇ ಉದುರಿ ಹೋಗುವಂತೆ' ಈ ವಿಶಾಲವಾದ ವಿಶ್ವದಲ್ಲಿ ನಮಗೆ ಅರಿಯದಂತೆ ಎಷ್ಟೋ ಜನ ಮಹಾತ್ಮರು ಅಗಾಧವಾದ ಪವಿತ್ರ ಜೀವನವನ್ನು ನಡೆಸಿ ಬದುಕಿ ಬೆಳಗಿ ಹೋಗಿದ್ದಾರೆ. ಆ ಪುಣ್ಯ ಜೀವಿಗಳ ಚಾರಿತ್ರಿಕ ಐತಿಹ್ಯವು ಇಂದು ನಮಗೆ ದೊರೆಯದೆ ಹೋಗಿದ್ದರೂ ದೇವರ ಚಿತ್ತ ವಿಶ್ವಸೃಷ್ಟಿಯ ಮಹಾ ತೇಜೋಮಯ ಇತಿಹಾಸದಲ್ಲಿ ಅದು ದೇವನಿಂದಲೇ ಬರೆಯಲ್ಪಟ್ಟಿದೆ. ಆ ದಿವ್ಯ ರಹಸ್ಯಮಯ ಮಹಾ ಚಿತ್ರವನ್ನು ವಿಶ್ವ ಚಕ್ಷುಸ್ಸಿನಿಂದ ವಿಶ್ವಾತ್ಮ ಜ್ಞಾನಿಗಳೇ ಕಂಡರಿಯಬಹುದು. ಭಗವಂತನ ವಿಶ್ವರಹಸ್ಯ ಘನ ಗಂಭೀರ ಭಾಷ್ಯ!

ಇನ್ನು ಹೆಸರುವಾಸಿಯಾದ ಮಹಾ ಮುನಿಗಳೇ ಮೊದಲಾದ ಋಷಿಪುಂಗವರ ಚರಿತ್ರೆಗಳನ್ನು ಮಾತ್ರ ನಾವು ಕಾಣಸಿಗುವ ಮಾನವ ದೃಷ್ಟಿಗೆ ಹೊಳೆಯುವ ಜಗತ್ತಿನ ಇತಿಹಾಸದಿಂದ ತಿಳಿಯುತ್ತ ಬಂದಿದ್ದೇವೆ. ಭಗವಾನ್ ಶ್ರೀಕೃಷ್ಣ, ಬುದ್ಧ, ಕ್ರಿಸ್ತ, ಮಹಮ್ಮದ, ಬಸವೇಶ್ವರ, ಗಾಂಧಿ ಮೊದಲಾದ ವಿಭೂತಿ ಪುರುಷರ ದಿವ್ಯ ಭವ್ಯ ಜೀವನ ಚರಿತ್ರೆಯನ್ನು ತಿಳಿಯುತ್ತಲಿದ್ದೇವೆ.

'ಕನ್ನಡನಾಡು ಪುಣ್ಯಪುರುಷರ ಬೀಡು' ಎಂಬ ಲೋಕೋಕ್ತಿಗನುಸಾರವಾಗಿ ಈ ಕಸ್ತುರಿಯ ಕನ್ನಡ ಭೂಮಿಯಲ್ಲಿ ಅದೆಷ್ಟೋ ಜನ ಸತ್ಪುರುಷರು, ಮಹಾತ್ಮರು, ಸಾಧುಸಂತರು, ಶಿವಯೋಗಿ ಪುಂಗವರು ಜನ್ಮವೆತ್ತಿ ಬಂದಿದ್ದಾರೆ. ಅವರೆಲ್ಲರೂ ವಿಶ್ವದ ಮಾನವಕೋಟಿಗೆ ಶಾಂತಿ ಸಂದೇಶವನ್ನು ಸಾರಿದ್ದಾರೆ. ಇಂತಹ ದಿವ್ಯ ಜೀವನವನ್ನು ಬಾಳಿಬೆಳಗಿದ ಶಿವಶರಣರ ಶ್ರೇಣಿಯಲ್ಲಿ ಅಥಣಿ ಶಿವಯೋಗಿಗಳು ಒಬ್ಬರು. ಇವರು ಇದೇ ಇಪ್ಪತ್ತನೆಯ ಶತಮಾನದಲ್ಲಿ ಆಗಿಹೋದವರು. ನಿತ್ಯವೂ ಶಿವಯೋಗಿಗಳು ಲಿಂಗ ಲೀಲಾ ವಿಲಾಸದಲ್ಲಿ ರಮಿಸಿ ಲಿಂಗವೇ ತಾನಾಗಿ ತೊಳಗಿ ಬೆಳಗಿದವರು. ಮಹಾನುಭಾವರಾದ ಬಸವಾದಿ ಪ್ರಮಥರು ಆಚರಿಸಿ ತೋರಿಸಿದ ಷಟ್‌ಸ್ಥಲ ಮಾರ್ಗದಲ್ಲಿ ಅತ್ಯಂತ ಶ್ರದ್ಧೆವಹಿಸಿ ನಡೆದು ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಚೆನ್ನಾಗಿ

ಅಳವಡಿಸಿಕೊಂಡು ಬೆಳಗಿದ ವೀರಶೈವ ವಿಖ್ಯಾತ ಪುರುಷರಲ್ಲಿ ಅಥಣಿಯ ಶಿವಯೋಗಿಗಳು ಅಗ್ರಗಣ್ಯರು.

**ಜನನ-ಬಾಲ್ಯ-ವಿದ್ಯಾಭ್ಯಾಸ:** ಪವಿತ್ರವಾದ ಕೃಷ್ಣಾನದಿಯ ದಡದಲ್ಲಿ ಇಂಗಾಳಗಾವಿ ಎಂಬುದೊಂದು ಗ್ರಾಮವು ಕಂಗೊಳಿಸುತ್ತಿದೆ. ಇದು ಅಥಣಿಯಿಂದ ಆರು ಮೈಲಿಗಳ ದೂರದಲ್ಲಿ ಇದೆ. ಈ ಗ್ರಾಮವು ಶಿವಭಕ್ತರಿಂದಲೂ ಮಠಮಾನ್ಯಗಳಿಂದಲೂ ಕೃಷಿ ಸಂಪತ್ತಿನಿಂದಲೂ ಕೂಡಿಕೊಂಡು ಮೆರೆಯುತ್ತಿದೆ. ಇಲ್ಲಿ ಶಿವಭಕ್ತಿ ಸಂಪನ್ನರಾಗಿದ್ದ ರಾಚಯ್ಯ-ನೀಲಮ್ಮ ಎಂಬ ದಂಪತಿಗಳು ವಾಸಿಸುತ್ತಿದ್ದರು. ಇವರು ದುರಾಶೆಯಿಂದ ದೂರಾಗಿ, ಶಿವನು ಕೊಟ್ಟುದರಲ್ಲಿಯೇ ತೃಪ್ತಿಪಡೆದು ಸಂತೋಷದಿಂದ ಕಾಲಹರಣ ಮಾಡುವರು. ರಾಚಯ್ಯನವರು ಸಾಮುದ್ರಿಕ ಶಾಸ್ತ್ರವನ್ನು ಬಲ್ಲವರಾಗಿದ್ದರು. ಈ ದಂಪತಿಗಳ ಉದರದಿಂದ ಈರ್ವರು ಮಕ್ಕಳಾಗಿದ್ದರೂ ಈ ಮಕ್ಕಳು ಲೋಕವ್ಯವಹಾರದಲ್ಲಿಯೇ ಕುಶಲರಾಗುವರೆಂದು ತಿಳಿದ ಸತಿ-ಪತಿಗಳು 'ಏಕಃ ಪುತ್ರೋ ಭೂಪತಿರ್ವಾಯತಿರ್ವಾ' ಎಂಬ ಆರ್ಯೋಕ್ತಿಯಂತೆ ಶಿವಯೋಗಿಯಾದ ಸತ್ಪುತ್ರನನ್ನು ಅಪೇಕ್ಷಿಸಿ ಸದಾ ಚಿಂತನೆಗೊಳಗಾಗಿದ್ದರು. ಒಂದು ದಿನ ರಾತ್ರಿಯಲ್ಲಿ ರಾಚಯ್ಯನವರು ನಿದ್ರೆ ಹೋಗಿದ್ದಾಗ ಸ್ವಪ್ನದಲ್ಲಿ ಶಿವನೇ ಜಂಗಮ ರೂಪದಲ್ಲಿ ಬಂದು 'ನಿನ್ನ ಇಷ್ಟಾನುಸಾರವಾಗಿ ಶಿವಯೋಗಿಯಾದ ಸತ್ಪುತ್ರನೋರ್ವನು ಜನಿಸಿ ಇಡಿಯ ಕನ್ನಡ ಕುಲವನ್ನೇ ಮಾತ್ರವಲ್ಲ ಲೋಕವನ್ನೂ ಉದ್ಧರಿಸುವನು. ನೀನು ಚಿಂತಿಸದಿರು, ಎಂದು ಹೇಳಿ ಹೋದನು. ಮುಂದೆ ಶಿವಕೃಪೆಗೆ ಪಾತ್ರರಾದ ದಂಪತಿಗಳ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಪತಿವ್ರತಾ ಶಿರೋಮಣಿಯಾದ ನೀಲಮ್ಮ ತಾಯಿಯು ನವಮಾಸಗಳು ತುಂಬಲಾಗಿ ಶಾಲಿವಾಹನ ಶಕ 1758ನೆಯ ದುರ್ಮುಖಿ ಸಂವತ್ಸರ ವೈಶಾಖಮಾಸ ಶುಕ್ಲಪಕ್ಷ 11 ಬೆಳಗಿನ 5 ಗಂಟೆಗೆ ಸುಪುತ್ರನನ್ನು ಹೆತ್ತರು. ಆಗ ದಶದಿಕ್ಕುಗಳಲ್ಲೆಲ್ಲ ಬೆಳಕಿನ ಶತದಲವು ಹರಡಿತು. ಶಿವಭಕ್ತರಲ್ಲಿ ಶುಭ ಚಿಹ್ನೆಗಳು ತೋರಿದವು. ಮಗುವಿಗೆ ಗುರುಲಿಂಗದೇವ ಎಂಬ ನಾಮಕರಣವನ್ನು ಮಾಡಿದರು. ಬಿದಿಗೆಯ ಚಂದ್ರನಂತೆ ಬೆಳೆಯುತ್ತಲಿದ್ದ ಗುರುಲಿಂಗದೇವರು ಸುನೀತಿ, ಸದಾಚಾರ, ಸೌಶಿಲ್ಯಗಳಿಂದ ಕೂಡಿ ಶಿವಯೋಗಿ ಲಕ್ಷಣಗಳಿಂದ ಪೂರಿತನಾದನು. ಮುಂದೆ ತಾಯಿ-ತಂದೆಗಳು ಈತನನ್ನು ಗುರುಕುಲವಾಸಕ್ಕಾಗಿ ಅಥಣಿಯ ಗಚ್ಚಿನಮಠಕ್ಕೆ ಕರೆದುಕೊಂಡು ಬಂದು ಶ್ರೀ ಮರುಳುಶಂಕರ ಶಿವಯೋಗಿಗಳ ಸನ್ನಿಧಿಗೆ ಸಮರ್ಪಿಸಿದರು. ಆಗ ಮರುಳುಶಂಕರ ಶಿವಯೋಗಿಗಳು ಈ ಮಹೇಶ್ವರ ದಂಪತಿಗಳ ಭಕ್ತಿ ವಿಶೇಷಕ್ಕೆ ಒಪ್ಪಿಗೆಯನ್ನಿತ್ತು ಅವರ ಈ ಪುತ್ರದಾನವನ್ನು ಸ್ವೀಕರಿಸಿ ಅವರನ್ನು ಕೊಂಡಾಡಿ ಹರಸಿ ಕಳಿಸಿದರು.

ಬಳಿಕ ಗುರುಗಳು ಗುರುಲಿಂಗದೇವನನ್ನು ಶಿವಾನುಭವ ಶಾಸ್ತ್ರದಲ್ಲಿ ಪರಿಣತರಾದ ಮಮದಾಪುರದ ಮು[illegible] ಶಿವಯೋಗಿಗಳಲ್ಲಿಗೆ ಕಳುಹಿಸಿದರು. ಅಲ್ಲಿ ಗುರುಗಳ

ಆಜ್ಞಾಪ್ಪಣೆಯನ್ನು ಶಿರಸಾವಹಿಸಿ ಅಭ್ಯಾಸಿಸುತ್ತಲಿದ್ದ ಗುರುಲಿಂಗದೇವರು ಶಿವಾನುಭವ ಸಿದ್ಧಾಂತವನ್ನು ಚೆನ್ನಾಗಿ ತಿಳಿಯುವವರಾದರು. ಇವರ ವಿದ್ಯಾ ಪಾಂಡಿತ್ಯವನ್ನು ಕಂಡು ಬೆರಗಾದ ಮಮದಾಪುರದ ಸ್ವಾಮಿಗಳು ಗುರುಲಿಂಗದೇವರಿಗೆ 'ಶಿವಯೋಗಿ ಶಿರೋಮಣಿಯಾಗಿ ಬಾಳು' ಎಂದು ಆಶೀರ್ವದಿಸಿದರು

**ಜಂಗಮಾಶ್ರಮ ಸ್ವೀಕಾರ-ದೇಶಸಂಚಾರ:** ಮುಂದೆ ಮರುಳುಶಂಕರ ಸ್ವಾಮಿಗಳವರ ಅಪ್ಪಣೆಯ ಮೇರೆಗೆ ಮರಳಿ ಅಥಣಿಗೆ ಬಂದು ತಮ್ಮ ಹದಿನಾರನೆಯ ವರ್ಷದಲ್ಲಿ ಗುರುಶಾಂತ ಸ್ವಾಮಿಗಳವರಿಂದ ಉಪದೇಶಾನುಗ್ರಹವನ್ನು ಪಡೆದು ವಿರಕ್ತಾಶ್ರಮವನ್ನು ಹೊಂದಿ ಗುರುಕರಸಂಜಾತರಾಗಿ ಮುರುಘದೇವ ಎಂಬ ಹೊಸ ಹೆಸರಿನಿಂದ ಒಪ್ಪಿದರು.

ಮಹಾನುಭಾವಿ ಶ್ರೀ ಬಸವಣ್ಣನವರ ವಚನಗಳ ವಿಷಯದಲ್ಲಿ ಮುರುಘದೇವರಿಗೆ ವಿಶೇಷವಾದ ಭಕ್ತಿ ವಿಶ್ವಾಸಗಳಿದ್ದವು. ಶ್ರೀ ಬಸವೇಶ್ವರರು ಮಂತ್ರಮಯ ಮೂರ್ತಿಯಾಗಿದ್ದುದರಿಂದ ಅವರ ಅಮೃತಮಯ ವಚನಗಳಿಗೆ ' ಅಪ್ಪನವರ ವಚನ ' ಎಂದು ನುಡಿಯುತ್ತಿದ್ದರು.

" ಆದ್ಯರ ವಚನ ಪರುಷ ಕಂಡಯ್ಯಾ, ಸದಾಶಿವನೆಂಬ
ಲಿಂಗವ ನಂಬುವುದು ನಂಬಲೊಡನೆ ನೀ ವಿಜಯ ಕಂಡಯ್ಯಾ ;
ಅಧರಕ್ಕೆ ಕಹಿ ಉದರಕ್ಕೆ ಸಿಹಿ ಕೂಡಲಸಂಗನ ಶರಣರ ವಚನ ಬೇವಸಬೆದಂತೆ
ಎಮ್ಮ ವಚನದೊಂದು ಪಾರಾಯಣಕ್ಕೆ, ವ್ಯಾಸನದೊಂದು ಪುರಾಣ ಸರಿಬಾರದಯ್ಯಾ ;
ನಮ್ಮ ವಚನದ ನೂರೆಂಟಧ್ಯಯನಕ್ಕೆ, ಶತರುದ್ರೀಯಾದಿ ಸಮಬಾರವಯ್ಯಾ,
ಎಮ್ಮ ವಚನದ ಸಾಸಿರ ಪಾರಾಯಣಕ್ಕೆ, ಗಾಯತ್ರೀ ಲಕ್ಷ ಜಪ ಸಮಬಾರದಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನಾ"

ಎಂಬ ಪುರಾತನರ ವಚನೋಕ್ತಿಗನುಸಾರವಾಗಿ ವೀರಶೈವ ಸಿದ್ಧಾಂತ ಸಾರಸರ್ವಸ್ವವೆನಿಸಿ ಭವರೋಗ ನಿವಾರಣೆಯನ್ನು ಮಾಡಬಹುದಾದ ಆದ್ಯರ ವಚನಗಳನ್ನು ಅತ್ಯಂತ ಆದರದಿಂದ ಅವರು ಅಧ್ಯಯನ ಮಾಡುತ್ತಿದ್ದರು. ಮುರುಘ ಯೋಗಿಗಳು ಗುರುಗಳಾದ ಗುರು ಶಾಂತ ಶಿವಯೋಗಿಗಳವರ ಸೇವಾತತ್ಪರತೆಯಲ್ಲಿ ನಿರತರಾಗಿದ್ದುಕೊಂಡು ಲಿಂಗಾರ್ಚನೆಯನ್ನು ಕೈರಿಸಿಕೊಂಡು ದಿನವೂ ಶ್ರೀ ಬಸವಣ್ಣನವರ ವಚನಗಳನ್ನು ಅಚಲ ಭಕ್ತಿಯಿಂದ ಪಾರಾಯಣ ಮಾಡುತ್ತಿದ್ದರು. ಅವುಗಳನ್ನು ತಾವೇ ಸ್ವತಃ ಬರೆದಿಟ್ಟುಕೊಂಡಿದ್ದರು, ಅಪ್ಪನವರ ವಚನಗಳೆಂದರೆ ಮುರುಘೇಂದ್ರಯೋಗಿಗಳಿಗೆ ಪಂಚಪ್ರಾಣ. ಶ್ರೀ ಬಸವಣ್ಣನವರ ವಚನರತ್ನಗಳು ಯಾವಾಗಲೂ ಅವರ ಹತ್ತಿರದಲ್ಲಿಯೇ ಇರಬೇಕು. ಅವರು ಶ್ರೀ ಬಸವಣ್ಣನವರ ವಚನ ಗ್ರಂಥವನ್ನು ತಮ್ಮ ತೊಡೆಯಮೇಲೆ ಇಟ್ಟುಕೊಳ್ಳುತ್ತಿದ್ದರು.

ವಚನಗ್ರಂಥವನ್ನು ನೆಲದಮೇಲೆ ಇಡುತ್ತಿರಲಿಲ್ಲ. ಈ ವಚನಗಳನ್ನು ಮಧ್ಯಾಹ್ನ ಕಾಲದಲ್ಲಿಯೂ ರಾತ್ರಿ ಪವಡಿಸುವ ಮುಂಚೆಯೂ ದಿನದಲ್ಲಿ ನಿತ್ಯವೂ ಎರಡು ಸಲ ನೋಡುವ ಪರಿಪಾಠ ಇವರದಾಗಿತ್ತು. ಈ ಪವಿತ್ರ ಸಮಯವು ಇದಕ್ಕಾಗಿಯೇ ಮೀಸಲಾಗಿತ್ತು.

ಒಂದು ದಿನ ಮುರುಘೇಂದ್ರಯೋಗಿಗಳಿಗೆ ದೇಶಸಂಚಾರವನ್ನು ಕೈಕೊಳ್ಳಬೇಕೆಂಬ ಇಚ್ಛೆಯಾಗಲು, ಗುರುಗಳ ನಿಯಮಾನ್ವಿತ ಅಪ್ಪಣೆಯನ್ನು ಪಡೆದು ಸಂಚಾರ ಹೊರಟರು. ಇವರು ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿ ಕಳೆಯುತ್ತ ಅಲ್ಲಲ್ಲಿ ಶಿವಯೋಗದ ಮಹಿಮೆಯನ್ನು ಬೀರುತ್ತ ಸಂಚರಿಸುತ್ತಿರಲಾಗಿ ಸಂತಸಗೊಂಡ ಭಕ್ತವೃಂದಿಣಿಯು ಭಕ್ತಿಭಾವ ಭರಿತರಾಗಿ ಮುಕ್ತಕಂಠದಿಂದ ಇವರಿಗೆ ಶಿವಯೋಗಿ ಎಂದು ಕರೆದರು. ಮುಂದೆ ಇವರಿಗೆ 'ಶಿವಯೋಗಿ' ಎಂದು ಹೆಸರೇ ಜನತೆಯಲ್ಲಿ ಬಳಕೆಯಾಗಿ ರೂಢವಾಯಿತು.

ಶಿವಯೋಗಿಗಳು ಉಳಿವೆ, ಗೋಕರ್ಣ, ಬನವಾಸಿ, ಹರಿಹರ, ಸೊಲ್ಲಾಪುರ, ಶ್ರೀಶೈಲ, ಶಂಭುಲಿಂಗನಬೆಟ್ಟ ಇವೇ ಮೊದಲಾದ ಕ್ಷೇತ್ರಗಳನ್ನು ಸಂಚರಿಸಿದರು. ಯೋಗಿಗಳು ಯಾವಾಗಲೂ ಪಾದಚಾರಿಗಳಾಗಿಯೇ ಸಂಚರಿಸುತ್ತಿದ್ದರು. ಒಂದು ದಿನ ಶಿವಯೋಗಿಗಳು ಹಿಪರಿಗೆ ಎಂಬ ಗ್ರಾಮಕ್ಕೆ ಹೋಗಿ ಒಂದು ಮನೆಯ ಬಾಗಿಲಲ್ಲಿ 'ಭಿಕ್ಷಾಂದೇಹಿ' ಎಂದು ನಿಂತಿರಲು ಆ ಮನೆಯ ಯಜಮಾನಿಯು ಒಂದು ಬೊಗಸೆ ಜೋಳವನ್ನು ತಂದು ಹಾಕಿದಳು. ಆಗ ಶಿವಯೋಗಿಗಳು ಅಲ್ಲಿಂದ ನದಿಗೆ ಹೋಗಿ ಸ್ನಾನ ಶಿವಾರ್ಚನೆಗಳನ್ನು ಗೆಯ್ದು ಆ ಜೋಳವನ್ನು ಕಲ್ಲುಬಂಡೆಯಮೇಲೆ ಅರೆದು ಅದನ್ನೇ ಲಿಂಗಾರ್ಪಿತಗೆಯ್ದರು. ಎನಿತೂ ದೇಹಾಭಿಮಾನ-ಮೋಹಪಾಶಗಳಿಲ್ಲದ ಈ ನೋಡಿಯೇ ನಿಜವಾದ ಶಿವಯೋಗಿ ಲಕ್ಷಣವೆನ್ನಬಹುದಲ್ಲವೆ?

(ಮುಂದುವರಿಯುತ್ತದೆ)

## 17-ಭಕ್ತ ಮಾನಕಂಜರ

—ಹೆಚ್. ಜಿ. ರಾಧಾದೇವಿ,
ನಂ. 12, 1. 17/4, ಬೀದೀಲುನಾಗಮ್ಮ ಮನೆ, ಗುಂಜ್ ರಸ್ತೆ ರಾಯಚೂರು-584101

ಚೋಳ ದೇಶದಲ್ಲಿ ಕುಂಜಾರ ಎಂಬ ಗ್ರಾಮ. ಅಲ್ಲಿ ಮಾನಕಂಜರ ಎಂಬ ಒಬ್ಬ ಹೊನ್ನಿನ ವ್ಯಾಪಾರಿ. ಅಪರಿಮಿತ ಶ್ರೀಮಂತ. ಹೊನ್ನು ಹಣದಲ್ಲಿ ಮಾತ್ರ ಶ್ರೀಮಂತನಲ್ಲ, ಶಿವಭಕ್ತಿಯಲ್ಲೂ ಅಷ್ಟೇ ಶ್ರೀಮಂತನವನು.

ಪ್ರತಿದಿನ ಶಿವಾಲಯಕ್ಕೆ ಹೋಗಿ ಮಾಣಿಕ್ಯದ ಹಾರ ಮುತ್ತಿನ ದಂಡೆಗಳಿಂದ ಶಿವನನ್ನು ಅಲಂಕರಿಸಿ ಮನಸಾರೆ ಪೂಜಿಸಿ ಬರುವನು. ಮನೆಗೆ ಬಂದ ಜಂಗಮರಿಗಾಗಲಿ ಸಾಧು ಸಂತರಿಗಾಗಲಿ ಊಟ ಉಪಚಾರ ಮಾಡಿಸುವುದಲ್ಲದೆ ಅವರು ಬೇಡಿದ್ದನ್ನು ಕೊಡುವನು. ಹೀಗೆ ಇರಲು ಒಮ್ಮೆ ಅವನ ಸತಿ– "ನಮಗೆ ಇಷ್ಟು ಐಶ್ವರ್ಯವಿದೆ, ಆದರೆ ಸಂತಾನ ಸೌಭಾಗ್ಯವಿಲ್ಲ, ಹೇಗಿದ್ದರು ಶಿವನಿಗೆ ನೀವು ಪರಮ ಭಕ್ತರು, ಪುತ್ರಭಿಕ್ಷೆ ಕೇಳಿ ಬನ್ನಿ" ಎಂದು ಒತ್ತಾಯಿಸುತ್ತಾಳೆ. ಮಾನಕುಂಜರನಿಗೆ ಬಹು ಸಂಕೋಚವಾಗುತ್ತದೆ. "ನನ್ನ ಭಕ್ತಿ ವ್ಯಾಪಾರಕ್ಕಾಯಿತೆ ? ಭಕ್ತಿ ಹರನಿಗೆ ಅರ್ಪಿಸಿ ಅವನನ್ನು ನನ್ನ ಬಯಕೆ ಸಲ್ಲಿಸೆಂದು ಮನದಲ್ಲಿ ಮೂಡಿದ್ದು ಕೇಳಿದ ಮೇಲೆ ಅದು ಭಕ್ತಿ ಹೇಗೆ ಆಗುತ್ತದೆ ? ವ್ಯಾಪಾರವಾಯಿತಲ್ಲ, ಆದರೆ ಸತಿಯ ಕಾಟ ಬಹಳವಾಗಿರುವುದು.

ಎಂದ ಮಿಡುಕುತ್ತಾ ಬಂದು ಎಂದಿನಂತೆ ರುದ್ರನಿಗೆ ಪೂಜಿಸಿ "ಭಕ್ತಿಗೆ ಸಂತುಷ್ಟನಾಗಿರ್ದೊಡೆ ಪುತ್ರಿಯಂ ಕೊಡು" ಎಂದು ನುಡಿಯುತ್ತಾನೆ. ಶಿವಲಿಂಗದೆದುರು ಇಟ್ಟ ಹಣ್ಣು ಹಾರಿಬಂದು ಇವನ ಜೋಗಸೆಯಲ್ಲಿ ಬೀಳುತ್ತದೆ. ಅದನ್ನು ಭಕ್ತಿಯಿಂದ ಮನೆಗೆ ತಂದು ಪತ್ನಿಗೆ ಕೊಡುತ್ತಾನೆ. ಆಕೆ ಪತಿಯೊಡನೆ ಅದನ್ನು ಸೇವಿಸುತ್ತಾಳೆ. ಪುತ್ರ ಎನ್ನುವ ಬದಲು ಸಂಕೋಚದಲ್ಲಿ ಮಿಡುಕುವಾಗ ಪುತ್ರಿ ಎಂದದ್ದು ತಿಳಿದು ಖಿನ್ನಳಾಗುತ್ತಾಳೆ.

ಆದರೆ ಗರ್ಭಧರಿಸಿ ನವಮಾಸ ಕಳೆದು ನಂತರ ಹುಟ್ಟಿದ ಪುತ್ರಿಯ ಅಪರಿಮಿತ ಸೌಂದರ್ಯ ನೋಡಿ ಪುತ್ರನಿಲ್ಲೆಂಬ ಮೋಹ ಸಹ ದೂರವಾಗುತ್ತದೆ.

ಚೆಲುವಿನ ಶಿಶುವಿನ ಬಾಲಲೀಲೆ ನೋಡುತ್ತಾ ದಂಪತಿಗಳಿಬ್ಬರು ಹಿಗ್ಗುತ್ತಿರುತ್ತಾರೆ. ಕಾಲಚಕ್ರ ಉರುಳಿತು. ಹದಿನಾರು ವರ್ಷವಾಯಿತು. ಮಾನಕಂಜರನ ಪುತ್ರಿಯ ಸೌಂದರ್ಯದ ವಾರ್ತೆ ಎಲ್ಲೆಲ್ಲೂ ಹಬ್ಬಿತು.

ಚೋಳರಾಜ ಬೆರಗಾಗಿ ನಿಜವಾರ್ತೆ ತಿಳಿದು ಬರಲು ತನ್ನ ಮಂತ್ರಿಯನ್ನೇ ಕಳಿಸಿದ. ಬಂದು ನೋಡಿದ ಮಂತ್ರಿ ಬೆರಗಾದ. "ಶಿವನ ವರಪ್ರಸಾದದಿಂದ ಹುಟ್ಟಿದ ಆಕೆಯ ಚೆಲುವಿಗೆ ನರನಾದ ನನ್ನಿಂದ ಬಣ್ಣಿಸಲು ಅಸಾಧ್ಯ ಪ್ರಭು. ಆ ಹೊಂಬಣ್ಣದ ತನುಕಾಂತಿ, ಮಾಟವಾದ ದೇಹಾಕೃತಿ ಕೆಂದುಟಿ.... ಮುತ್ತಿನ ಸಾಲಿನಂತಾ ಕಿರುಪಲ್ಗಳು... ಆ ದುಂಬಿ ಗುರುಳು... ಮನ್ಮಥನ ಬಾಣದಂತಹ ಹುಬ್ಬುಗಳು, ಆ ಕಪ್ಪಾದ ಕಂಗಳ ಹೊಳಪು..."

ಎಂದು ಬಗೆ ಬಗೆಯಾಗಿ ಬಣ್ಣಿಸಿದ ಮಂತ್ರಿ, ಹಾಗಾದರೆ ರಾಜಕುಮಾರನಿಗೆ ಆ ಕನ್ಯೆಯನ್ನು ಗೊತ್ತು ಮಾಡಿಬಿಡಿ" ಎಂದು ಹೇಳಿದ ಚೋಳರಾಜ.

ಮಾನಕಂಜರನಿಗೆ ವಾರ್ತೆ ಹೋಯಿತು. ಮುತ್ತಿನ ಚಪ್ಪರ ಹಾಕಿಸಿ ಹೊನ್ನಿನ ಮಂಟಪಾ ಕಟ್ಟಿ ವೈಭವದಿಂದ ಮಗಳ ಮದುವೆಗೆ ಸಿದ್ಧಮಾಡಿದ ಮಾನಕಂಜರ. ರಾಜ, ರಾಣಿ, ರಾಜಕುಮಾರ ಇತ್ಯಾದಿ ಬೀಗರ ದಿಬ್ಬಣವನ್ನು ಎದುರುಗೊಂಡು ರಾಜಪರಿವಾರಕ್ಕೆ ಯೋಗ್ಯವಾದ ಬಿಡದಿ ಮನೆಯಲ್ಲಿ ಇರಿಸಿ ಅವರಿಗೆ ಸಕಲ ಉಪಚಾರ ಮಾಡಿಸಿದ

ಇಡಿ ಪುರವೆ ಸಂಭ್ರಮದಿಂದ ನೆರದಿದೆ ಈ ಲಗ್ನಕ್ಕೆ ಆ ದಿನವೆ ಮದುವೆ. ಮದುಮಗಳು ಹಸೆಮೇಲೆ ಬಂದಿದ್ದಾಳೆ. ಇನ್ನೇನು ಧಾರೆ ಎರೆದು ಕೊಡಬೇಕು, ಆಗ ಹಸೆಮೇಲೆ ಹರನು ಪ್ರತ್ಯಕ್ಷನಾದ.

ಕೆಂಜೆಡೆಯ ಸುಳಿಸಲ್ಲ.... ಭಸ್ಮಭೂಸಿತ ಜಂಗಮ ಹಣೆಯಲ್ಲೊಂದು ಕಣ್ಣು... ಕಪ್ಪುಗೊರಳು.

ಮಾನಕಂಜರ ತನ್ನ ಇಷ್ಟ ದೈವದ ಕಾಲಿಗೆ ಬಿದ್ದು...... "ಪ್ರಭೂ ಏನಪ್ಪಣೆ..?" ಎಂದ. ಆಗ ಶಿವಾ ಸಂಕೋಚ ಸೂಸಿ—

"ಈಗ ಒಳ್ಳೆ ಮಂಗಳದ ಸಮಯಾ.... ನಾವು ಬೇಡಿದುದನ್ನು ನೀನು ಕೊಡಲಾರೆಯೆಂದು ಕಾಣುತ್ತದೆ, ಇನ್ನೊಮ್ಮೆ ಬರುವೆನೆಂದು" ಹೇಳುತ್ತಿರಲು ಗಟ್ಟಿಯಾಗಿ ಪಾದಗಳನ್ನು ಹಿಡಿದು "ಪ್ರಭೂ ನಿಮ್ಮ ದರ್ಶನಕ್ಕಿಂತ ಬೇರೆ ಮಂಗಳವುಂಟೆ? ನಿಮ್ಮ ಸ್ಪರ್ಶಕ್ಕಿಂತ ಬೇರೆ ಮಂಗಳವುಂಟೆ?" ಏನು ಹೇಳಿದರೂ ಮಾಡುವೆ ಹೇಳಿ" ಎಂದು ಬೇಡಿಕೊಳ್ಳುತ್ತಾನೆ ಆಗ ಶಿವಾ ನಗುತ್ತಾ "ನಿಮ್ಮ ಮಗಳ ತಲೆಗೂದಲು ರೇಶ್ಮೆಗಿಂತ ಮೃದುವಾಗಿದೆ.... ಕೈಲಾಸದ ಕಲ್ಲು ನೆಲದಲ್ಲಿ ಕಾಲೂರಿ ನನ್ನ ಬೆರಳುಗಳು ನೊಂದಿವೆ, ನನ್ನ ಸಿಂಹಾಸನದೊಳಗೆ... ಅಲ್ಲಲ್ಲಿ ಕೆಳಗೆ... ಕಾಲಿಗೆ ಮೃದುವಾಗಿರುವಂತೆ ಕಾಲಿಡುವಲ್ಲಿ ಹಾಸಲು ಆ ಮುಡಿಗೂದಲು ಬೇಕಾಗಿದೆ" ಎನ್ನುವನು.

ಆಗ ಮಾನಕಂಜರ ಭಕ್ತಿಯಿಂದ ನಮಸ್ಕರಿಸಿ- "ಇದ್ದದ್ದನ್ನು ಕೊಡುವುದಕ್ಕೆ ಉಪಚಾರದ ಮಾತೇಕೆ? ಸುತೆಯೆ ನಿಮ್ಮವಳು, ನಿಮ್ಮ ವರದಾತೆ, ಇನ್ನು ಅವಳ ಮುಡಿಗೂದಲು ಕೇಳಲು ನಿಮಗೇಕೆ ಇಂಥಾ ಸಂಕೋಚ ಎಂದು ಹಸೆಮಣೆಯ ಬಳಿ ಹೋಗಿ ಕಠಾರಿ ಹಿಡಿದು ಮಗಳ ಮುಂದಲೆ ಕೂದಲಿಂದ್ಹಿಡಿದು ಮುಡಿ ಪೂರ್ತಿ ಕತ್ತರಿಸಿಕೊಳ್ಳುತ್ತಾನೆ.

ರಾಜದಿಬ್ಬಣಾ ಬೆರಗಾಗಿ ಗೋಳಿಟ್ಟಿತು. ಕಠಿಣಾತ್ಮನೀ ಪಿತ... ಹಸೆಯ ಮೇಲಿರ್ಪ ಮಗಳ ಮುಡಿ ಕೊಯ್ಯುವರೆ? ಎಂದು ಬೊಬ್ಬಿಟ್ಟಿತು. ಅಪಚಾರ... ಅಪಶಕುನಾ.... ಎಂದು ಛೀಳಿಟ್ಟಿತು.

ಇವನೊಬ್ಬ ಹುಚ್ಚಾ ಎಂದು ಬೈದರು ಪುರಜನರು. ಆದರೆ ಮಾನಕಂಜರ ನಿಶ್ಚಲ ಮನದಿಂದ ಆ ಕೇಶರಾಶಿ ತಂದು ಶಿವನ ಪಾದಕ್ಕರ್ಪಿಸುತ್ತಾನೆ.

ಆಗ ದೇವತೆಗಳು ಹೂಮಳೆಗರೆಯುತ್ತಾರೆ. ಕೈಲಾಸದಿಂದ ರತ್ನ ಕಚಿತ ವಿಮಾನ ಇಳಿಯುತ್ತದೆ.

ಆಗ ಶಿವಾ ಪಾರ್ವತಿಯೊಡನೆ ಎಲ್ಲರಿಗೂ ದರ್ಶನ ನೀಡಿ "ಮಾನಕಂಜರ ಅವನ ಸತಿ ಸುತೆಯರನ್ನು ಎಲ್ಲರು ನೋಡುತ್ತಿದ್ದಂತೆಯೆ ವಿಮಾನದಲ್ಲಿ ಕೂಡಿಸಿ ಕೊಂಡು ಕೈಲಾಸಕ್ಕೆ ಕರೆದೊಯ್ಯುತ್ತಾನೆ.

ಮಾನಕಂಜರನಿಗೆ ಕೈಲಾಸದಲ್ಲಿ ಗಣ ಪದವಿಯನ್ನು ಕೊಡುತ್ತಾನೆ. ●

# ಮಕ್ಕಳ ಆರೋಗ್ಯ ರಕ್ಷಣೆ-೨

## ಹೊಸಯುಗಾರಂಭ

—ಡಾ|| ಹೆಚ್. ಡಿ. ಚಂದ್ರಪ್ಪಗೌಡ
62, ಶ್ರೀನಿವಾಸ ನಿಲಯ, ಮೀರ್ಷ ಕಾಪೌಂಡು, ಶಿವಮೊಗ್ಗ-577201

### ರೋಗ ನಿರೋಧಕ ಮದ್ದುಗಳ ಬಳಕೆ

ಅನಾದಿ ಕಾಲದಿಂದಲೂ ಮಾನವ ಕುಲಕ್ಕೆ ಮಾರಕ ಪಿಡುಗೆನಿಸಿದ್ದ ಮೈಲಿಬೇನೆ (Small Pox) ಯನ್ನು ದೇವಿ ಹಾಕುವುದರ (Vaccination) ಮೂಲಕ ತಡೆಗಟ್ಟಬಹುತೆಂಬುದನ್ನು ಎಡ್ವರ್ಡ್ ಜೆನ್ನರ್ ಎರಡು ಶತಮಾನಗಳ ಹಿಂದೆ ಯಶಸ್ವಿಯಾಗಿ ಪ್ರದರ್ಶಿಸಿದ. ಅದೇ ತತ್ವದ ಮುಂದುವರಿದ ಸಂಶೋಧನೆಗಳಿಂದ ಧನುರ್ವಾಯು (Tetanus), ಗಂಟಲುಮಾರಿ (Diptheria), ನಾಯಿಕೆಮ್ಮು (Woophing Cough), ಪೋಲಿಯೋ ಮೈಲೈಟಿಸ್ ಕ್ಷಯ (T.B.) ದಡಾರ (Measels) ಇತ್ಯಾದಿ ಸೋಂಕು ರೋಗಗಳನ್ನು ತಡೆಗಟ್ಟುವುದು ಈಗ ಸಾಧ್ಯವಾಗಿದೆ. ಮೈಲಿ ಬೇನೆಯಂತೂ ಈಗ ಜಗತ್ತಿನಿಂದಲೇ ಉಚ್ಚಾಟನೆಯಾಗಿದೆ! ಆದರೂ ಹಿಂದುಳಿದ ರಾಷ್ಟ್ರಗಳಲ್ಲಿ ಪ್ರತಿಯೊಂದು ನಿಮಿಷದಲ್ಲೂ ಈ ರೋಗಗಳಿಂದಲೇ ಹತ್ತು ಮಕ್ಕಳು ಈಗಲೂ ಅಸು ನೀಗುತ್ತಿದ್ದಾರೆ. ಬದುಕುಳಿದ ಅಷ್ಟೇ ಪ್ರಮಾಣದ ಮಕ್ಕಳು ಹಲವಾರು ಭೀಕರ ನ್ಯೂನತೆಗಳಿಂದ ಬಳಲುತ್ತಿದ್ದಾರೆ.

ಈ ಸೋಂಕು ರೋಗಗಳ ವಿರುದ್ಧ ಉಪಯೋಗಿಸಬಹುದಾದ ನಿರೋಧಕ ಲಸಿಕೆ ಮತ್ತು ಮದ್ದುಗಳು ಸಾಕಷ್ಟು ಪ್ರಮಾಣದಲ್ಲಿ ಈಗ ಲಭ್ಯವಿವೆ. ಶೀತಲ ವಾತಾವರಣದಲ್ಲಿ ಅವುಗಳನ್ನು ಶೇಖರಿಸಿಟ್ಟು "(Cold Chain)" ದೇಶದ ಮೂಲೆ ಮೂಲೆಗಳಿಗೆ ರವಾನಿಸಿ ಹಂಚುವ ವ್ಯವಸ್ಥೆಗಳಿಗೂ ಕುಂದಿಲ್ಲ. ಕಾಲಕಾಲಕ್ಕೆ ಮಕ್ಕಳಿಗೆ ಅವುಗಳನ್ನು ನೀಡಲು ಸರ್ಕಾರ ಮತ್ತು ಸ್ವಯಂಸೇವಾ ಸಂಸ್ಥೆಗಳು ಪ್ರಯತ್ನಿಸುತ್ತಲೂ ಇವೆ. ಆದರೂ ಒಂದು ಪ್ರದೇಶದಲ್ಲಿರುವ ಮಕ್ಕಳಲ್ಲಿ ಪ್ರತಿ ಶತ 20–30 ರಷ್ಟು ಮಂದಿಗೆ ಮಾತ್ರ ಪೂರ್ಣ ರಕ್ಷಣೆ ನೀಡಲು ಸಾಧ್ಯವಾಗುತ್ತಿದೆಯೆಂಬುದು ಹಲವಾರು ಸಮೀಕ್ಷೆಗಳಿಂದ ತಿಳಿದುಬಂದಿದೆ. ಇದೊಂದು ವಿಪರ್ಯಾಸವೇ ಸರಿ.

ರೋಗ ನಿರೋಧಕ ಮದ್ದು ಲಸಿಕೆಗಳ ಪ್ರಯೋಗದಿಂದ ಸಂಪೂರ್ಣ ರಕ್ಷಣೆ ದೊರೆಯಬೇಕಾದರೆ ಅವುಗಳನ್ನು ಕೆಲವು ವಾರ ಅಥವಾ ತಿಂಗಳುಗಳ ಅಂತರದಲ್ಲಿ

2–3 ಬಾರಿ ನೀಡಬೇಕಾಗುತ್ತದೆ (ಚೌಕಟ್ಟಿನಲ್ಲಿರುವ ವಿವರಣೆ ನೋಡಿ). ಆರೋಗ್ಯ

ಗರ್ಭಿಣಿಯರು ಮತ್ತು ಶಿಶುಗಳಿಗೆ ರೋಗ ನಿರೋಧಕ
ಲಸಿಕೆ/ಮದ್ದುಗಳನ್ನು ನೀಡಬೇಕಾದ ಕ್ರಮ

| | ವಯಸ್ಸು | ಲಸಿಕೆ/ಮದ್ದು | ಎಷ್ಟು ಸಾರಿ? | ಅಂತರ |
|---|---|---|---|---|
| ಗರ್ಭಿಣಿ ಸ್ತ್ರೀ | 12-32 ವಾರ | ಟಿ.ಟಿ. | ಎರಡು | ತಿಂಗಳಿಗೊಂದಾವರ್ತಿ |
| ಶಿಶು | 3-9 ತಿಂಗಳು | ಡಿ.ಪಿ.ಟಿ. | ಮೂರು | 1–2 ತಿಂಗಳಿಗೊಂದಾವರ್ತಿ |
| | | ಪೋಲಿಯೋ | ಮೂರು | 1–2 ತಿಂಗಳಿಗೊಂದಾವರ್ತಿ |
| | | ಬಿ.ಸಿ.ಜಿ. | ಒಂದು | — |
| | 9-12 ತಿಂಗಳು | ದಡಾರ | ಒಂದು | — |
| | 8-24 ತಿಂಗಳು | ಡಿ.ಪಿ.ಟಿ. | ಒಂದು | — |
| | | ಪೋಲಿಯೋ | ಒಂದು | — |

ಟಿ.ಟಿ.— ಧನುರ್ವಾಯು (ಟಿಟನಸ್) ವಿರುದ್ಧ ಲಸಿಕೆ

ಡಿ.ಪಿ.ಟಿ.— ಗಂಟಲು ಮಾರಿ, ನಾಯಿಕೆಮ್ಮು, ಧನುರ್ವಾಯು ವಿರುದ್ಧ ಲಸಿಕೆ.

ಇಲಾಖೆಯ ಕಾರ್ಯಕರ್ತರು ಮನೆಗಳಿಗೆ ಭೇಟಿ ನೀಡಿ ಈ ಮದ್ದುಗಳನ್ನು ಕ್ರಮವರಿತು ಎಲ್ಲ ಮಕ್ಕಳಿಗೂ ನೀಡಬೇಕೆಂಬ ನಿಯಮವಿದೆ. ಅದಕ್ಕಾಗಿ ಅವರಿಗೆ ಸಾಧಿಸಬೇಕಾದ ಗುರಿಗಳನ್ನು ನಿಗಧಿಸಲಾಗಿರುತ್ತದೆ. ರೋಟರಿ, ಲಯನ್ಸ್‌ನಂತಹ ಸ್ವಯಂ ಸೇವಾ ಸಂಸ್ಥೆಗಳವರೂ ಸಹ ಆಗಿಂದಾಗ್ಗೆ ಶಿಬಿರಗಳನ್ನೇರ್ಪಡಿಸಿ ಈ ಲಸಿಕೆ ಮದ್ದುಗಳನ್ನು ಸಾಮೂಹಿಕವಾಗಿ ನೀಡಲು ಸಹಕರಿಸುತ್ತಾರೆ. ಒಂದು ಪ್ರದೇಶದಲ್ಲಿರಬಹುದಾದ ಪ್ರತಿ ಶತ ಒಂದು ನೂರು ಮಕ್ಕಳಲ್ಲಿ 60–70 ಮಂದಿ ಮೊದಲ ಶಿಬಿರಕ್ಕೆ ಹಾಜರಾದರೆ, ಎರಡನೆಯದಕ್ಕೆ ಅವರಲ್ಲಿ 40–50 ರಷ್ಟು ಮತ್ತು ಕೊನೆಯ ಕಂತಿಗೆ 20–30 ಮಕ್ಕಳು ಹಾಜರಾಗುತ್ತಿರುವುದು ಎಲ್ಲಾ ಕಡೆಗಳ ಅನುಭವ. ರೋಗ ನಿರೋಧಕ ಮದ್ದುಗಳ ಉಪಯುಕ್ತತೆ ಬಗೆಗೆ ಸಾರ್ವಜನಿಕರಲ್ಲಿರುವ ಅಜ್ಞಾನ, ಮೂಢನಂಬಿಕೆ ಮತ್ತು ಉದಾಸೀನತೆ ಒಂದು ಕಡೆ, ಕಾರ್ಯಕರ್ತರ ಕರ್ತವ್ಯಲೋಪತೆ ಇನ್ನೊಂದು ಕಡೆ, ಜನರ ಅನುಕೂಲ, ಸಮಯಗಳಿಗೆ ಹೊಂದಿಕೊಳ್ಳುವ ಏರ್ಪಾಡುಗಳೂ ಕೆಲಮಟ್ಟಿಗೆ ವಿಫಲತೆಗೆ ಕಾರಣವೆನ್ನಬಹುದು. ಕೆಲವು ರಾಷ್ಟ್ರಗಳಲ್ಲಿ ವರ್ಷದ ಕೆಲವು ದಿನಗಳನ್ನು ರಾಷ್ಟ್ರೀಯ ರೋಗನಿರೋಧಕ ಮದ್ದುಗಳನ್ನು ಸಾಮೂ

ಹಿತವಾಗಿ ನೀಡುವ ದಿನಗಳನ್ನಾಗಿ ಆಚರಿಸಿ ಪ್ರತಿಯೊಂದು ಮಗುವಿಗೂ ರಕ್ಷಣೆ ದೊರೆಯುವಂತೆ ನೋಡಿಕೊಳ್ಳಲಾಗುತ್ತಿದೆ. ಜೊತೆಗೆ ಶಾಲೆಗೆ ಪ್ರವೇಶ ನೀಡುವ ಸಮಯದಲ್ಲಿ ರೋಗನಿರೋಧಕ ಮದ್ದುಗಳನ್ನು ತೆಗೆದುಕೊಂಡ ಅಧಿಕೃತ ದಾಖಲೆಗಳನ್ನು ಹಾಜರು ಮಾಡುವುದು ಶಾಸನ ಬದ್ಧವಾಗಿ ಖಡ್ಡಾಯವಾಗಬೇಕು. ಕೆಲ ಸಮಯದ ಹಿಂದೆ ಸೈಲಿ ಬೇನೆ ಬಗೆಗೆ ದೇವಿ ಹಾಕಿಸುವುದು ಈ ರೀತಿ ಖಡ್ಡಾಯವಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ರೋಗನಿರೋಧಕ ಮದ್ದುಗಳ ಉಪಯುಕ್ತತೆಯ ಬಗೆಗೆ ಪ್ರಚಾರ ಮತ್ತು ಆರೋಗ್ಯ ಶಿಕ್ಷಣ ವ್ಯಾಪಕವಾಗಿ ಅತ್ಯಂತ ತುರ್ತಾಗಿ ಜರುಗಬೇಕಾಗಿದೆ.

## ದೀರ್ಘ ಕಾಲದ ಸ್ತನ್ಯಪಾನ

ಹಸು ಕೂಸುಗಳಿಗೆ ಮೊಲೆಯುಣಿಸಿ ಪೋಷಿಸುವುದು ಮಾನವನೂ ಸೇರಿದಂತೆ ಇತರ ಸಸ್ತನಿ (Mammals) ವರ್ಗದ ಪ್ರಾಣಿಗಳ ಪ್ರಕೃತಿ ನಿಯಮ. ಹಿಂದೆ ಈ ಪದ್ಧತಿ ವ್ಯಾಪಕವಾಗಿ ಅನುಸರಿಸಲ್ಪಡುತ್ತಿತ್ತು. ದೀರ್ಘಕಾಲ ಮೊಲೆಯುಣಿಸುವುದರಿಂದ ಸ್ತನಗಳ ಸೌಂದರ್ಯ ಕೆಡುತ್ತದೆಂಬ ಭಾವನೆ ನಾಗರೀಕತೆ ಊರ್ಜಿಸಿದಂತೆಲ್ಲಾ ಬೆಳೆದು ಬಂದದ್ದರಿಂದ ಆಧುನಿಕ ಮಹಿಳೆಯರು ಈ ಬಗ್ಗೆ ನಿರ್ಲಕ್ಷ್ಯ ಮಾಡಲಾರಂಭಿಸಿದರು. ಜೊತೆಗೆ ಹಲವಾರು ಬಗೆಯ ಕೃತಕ ಹಾಲು ಪುಡಿಗಳ ಉಗಮ ಮತ್ತು ಅವುಗಳ ತಯಾರಕರ ಅಬ್ಬರದ ಪ್ರಚಾರ ಈ ದಿಸೆಯಲ್ಲಿ ಹೆಚ್ಚಿನ ಕೆಡುಕಿಗೆ ಕಾರಣವಾಯಿತು. ಇತ್ತೀಚಿನ ವರ್ಷಗಳಲ್ಲಿ ಮತ್ತೆ ಸ್ತನ್ಯಪಾನದ ಉಪಯುಕ್ತತೆಯ ಬಗೆಗೆ ಕಳಕಳಿ ಮೂಡುತ್ತಿರುವುದು ಆಶಾದಾಯಕ ಸಂಗತಿ.

ಎದೆಹಾಲಿನಲ್ಲಿ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅವಶ್ಯವಿರುವ ಪೋಷಕಾಂಶಗಳು ಸರಿಯಾದ ಪ್ರಮಾಣದಲ್ಲಿ ಪ್ರಕೃತಿದತ್ತವಾಗಿರುತ್ತವೆ. ಜೊತೆಗೆ ಮಾತೃಜನ್ಯವಾದ ಹಲವು ರೋಗ ನಿರೋಧಕ ಅಂಶಗಳಿದ್ದು, ಮಗು ಜನಿಸಿದ ಕೆಲವು ಸಮಯದವರೆಗೆ ಅಂತಹ ರೋಗಗಳಿಂದ ರಕ್ಷಣೆ ದೊರೆಯುತ್ತದೆ. ಮಗುವಿಗೆ ಮೊಲೆಯುಣಿಸುವ ಪರ್ಯಂತ ತಾಯಿಯ ರಕ್ತದಲ್ಲಿ ಪ್ರವಹಿಸುವ ಕೆಲವು ರಸದೂತ (Hormones) ಗಳ ಪ್ರಭಾವದಿಂದ ಮತ್ತೆ ಗರ್ಭಧರಿಸುವ ಸಾಧ್ಯತೆ ತೀರಾ ಕಡಿಮೆ. ಇಂತಹ ನೈಸರ್ಗಿಕ ಸಂತಾನ ನಿರೋಧಕ್ರಮದಿಂದ ಮಕ್ಕಳು ಜನಿಸುವ ಅಂತರವನ್ನು ಹೆಚ್ಚಿಸಬಹುದು. ಸ್ತನಗಳ ಕ್ಯಾನ್ಸರ್, ಮಕ್ಕಳಾಗದ ಮಹಿಳೆಯರು ಮತ್ತು ದೀರ್ಘ ಕಾಲದ ಮೊಲೆಯುಣಿಸದ ಮಹಿಳೆಯರಲ್ಲಿ ಹೆಚ್ಚು ಪ್ರಮಾಣದಲ್ಲಿ ಕಂಡುಬರುವುದರಿಂದ, ದೀರ್ಘಕಾಲ ಮೊಲೆಯುಣಿಸುವುದು ಸ್ತನಗಳ ಕ್ಯಾನ್ಸರನ್ನು ತಡೆಗಟ್ಟುವಲ್ಲಿ ಸಹಕಾರಿಯಾಗುತ್ತದೆಂಬುದು ಈ ದಿಸೆಯಲ್ಲಿ ಗಮನಿಸಬೇಕಾದ ಪ್ರಮುಖ ಅಂಶ.

ಕೃತಕ ಹಾಲನ್ನು ಎಷ್ಟೇ ಕರಾರುವಾಕ್ಕಾಗಿ ತಯಾರಿಸಿದ್ದರೂ ಪ್ರಕೃತಿದತ್ತ ತಾಯಿಯ ಹಾಲಿನ ಸಮಾನ ಬರಲು ಸಾಧ್ಯವಿಲ್ಲ. ಎಂತಹ ಬಡತನದ ತಾಯಿಯ ಹಾಲು, ಸಿರಿವಂತ ತಾಯಿಯ ಹಾಲಿಗಿಂತ ಗುಣಮಟ್ಟದಲ್ಲಿ ಕಡಿಮೆ ಇರುವುದಿಲ್ಲ. ಬಾಟಲಿ ಹಾಲನ್ನು ವಿವಿಧ ಅಂಶಗಳ ಸಂಯೋಜನೆಯಿಂದ ತಯಾರಿಸುವುದರಿಂದ ಕೆಲವು ದುಷ್ಪರಿಣಾಮಗಳುಂಟಾಗಲು ಸಾಧ್ಯ. ಅದನ್ನೆ ಮನೆಯಲ್ಲಿ ಸಿದ್ಧಪಡಿಸುವಾಗ ಹಾಕಬೇಕಾದ ನೀರಿನ ಪ್ರಮಾಣ ಹೆಚ್ಚು ಕಡಿಮೆಯಾದರೆ ಶಿಶುವು ಅಜೀರ್ಣ ಇಲ್ಲವೆ ನ್ಯೂನ ಪೋಷಣೆಯಿಂದ ಬಳಲಬೇಕಾಗಬಹುದು. ಅದನ್ನು ತಯಾರಿಸುವವರು ಅತ್ಯಂತ ಶುಚಿಯಾದ ವಾತಾವರಣದಲ್ಲೇ ಬೇಕಲ್ಲದೆ, ಪ್ರತಿ ಸಾರಿಯೂ ಬಾಟಲಿ ರೋಗಾಣುಗಳಿಂದ ಕಲುಷಿತವಾಗದಂತೆ ಎಚ್ಚರ ವಹಿಸಬೇಕು. ಆದರಿಂದ ಬಾಟಲಿ ಹಾಲು ಸೇವಿಸುವ ಮಕ್ಕಳು ಮೊಲೆಯುಣ್ಣುವ ಮಕ್ಕಳಿಗಿಂತ ಹೆಚ್ಚಾಗಿ ಕೆಮ್ಮು, ಜ್ವರ, ವಾಂತಿ-ಭೇದಿಗಳಿಂದ ಪದೇ ಪದೇ ನರಳಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಮಕ್ಕಳಿಗೆ ಕನಿಷ್ಠ ಒಂದು ಅಥವಾ ಒಂದೂವರೆ ವರ್ಷಗಳಾದರೂ ಮೊಲೆಯುಣಿಸುವುದು ತಾಯಿ ಮತ್ತು ಮಗು ಇಬ್ಬರ ಆರೋಗ್ಯದ ದೃಷ್ಟಿಯಿಂದ ಶ್ರೇಯಸ್ಕರ.

ಕೃತಕ ಹಾಲಿನ ತಯಾರಿಕೆ ಮತ್ತು ಪ್ರಚಾರದ ಬಗೆಗೆ ಈಗ ಪ್ರಪಂಚದಾದ್ಯಂತ ವಿರೋಧ ವ್ಯಕ್ತಪಡುತ್ತಿದೆ. ವಿಶ್ವ ಆರೋಗ್ಯ ಸಂಸ್ಥೆ (W.H.O)ಯ ಅವಿಶ್ರಾಂತ ಶ್ರಮದಿಂದ ಹಲವಾರು ದೇಶಗಳಲ್ಲಿ ಅವುಗಳ ಅನವಶ್ಯಕ ಪ್ರಚಾರಕ್ಕೆ ಕಡಿವಾಣ ಬಿದ್ದಿದೆ. ಭಾರತದಲ್ಲೂ ಈ ಬಗೆಗೆ ಸುಗ್ರೀವಾಜ್ಞೆಯಾಗಿದ್ದು ಕೃತಕ ಹಾಲುಡಬ್ಬಗಳ ಮೇಲೆ "ಸ್ತನ್ಯಪಾನವೇ ಶ್ರೇಷ್ಠ" ವೆಂಬ ಘೋಷಣೆಯನ್ನು ಮುದ್ರಿಸಲಾಗುತ್ತಿದೆ.

ಸ್ತನ್ಯಪಾನದ ಶ್ರೇಷ್ಠತೆಯ ಬಗೆಗೆ ಹಳ್ಳಿಗಾಡಿನ ಮುಗ್ಧ ಮಾತೆಯರಿಗೇ ಅಲ್ಲದೆ ಬುದ್ಧಿಜೀವಿ ತಾಯಂದಿರಿಗೂ ಸೂಕ್ತ ತಿಳುವಳಿಕೆ ನೀಡಬೇಕಾಗಿದೆ. ವೈದ್ಯರು, ಆರೋಗ್ಯ ಕಾರ್ಯಕರ್ತರು, ಮಹಿಳಾ ಮಂಡಲದಂತಹ ಸಂಘ-ಸಂಸ್ಥೆಗಳು ಈ ದಿಸೆಯಲ್ಲಿ ಪ್ರಮುಖ ಪಾತ್ರವಹಿಸಬೇಕು. ಕಾರ್ಯನಿರತ ಮಾತೆಯರು ಹೆಚ್ಚಾಗಿರುವ ಕಡೆಗಳಲ್ಲಿ ಕೂಸು ಮಂದಿರ (Creche) ಗಳ ಏರ್ಪಾಡುಮಾಡಿ ಅವರ ಕಂದಮ್ಮಗಳಿಗೆ ಕಾಲ ಕಾಲಕ್ಕೆ ಮೊಲೆಹಾಲು ದೊರಕಿಸುವ ಏರ್ಪಾಡು ಸಹ ಆಗಬೇಕು. ●

---

ಮಕ್ಕಳ ಬೆಳವಣಿಗೆಯ ಪರಿಶೀಲನೆ ಮತ್ತು ಕಾರ್ಯಕ್ರಮಗಳ ಯಶಸ್ಸಗೆ ಸಲಹೆಗಳು ಮುಂದಿನ ಸಂಚಿಕೆಯಲ್ಲಿ.

# ಸಹಕಾರಿ ಸಾಗುವಳಿ

## ಕೃಷಿ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲು.

—ಡಿ. ವೆಂಕಟರಾವ್, ಎಂ.ಎ.
'ಚಂದನ' ವಿದ್ಯಾನಗರ, ಹಾಸನ.

ಕಳೆದ ಕೆಲವು ವರ್ಷಗಳಿಂದ ಆಹಾರ ಕೊರತೆಯು ನಮ್ಮ ಪ್ರಮುಖ ಸಮಸ್ಯೆಯಾಗಿ ಪರಿಣಮಿಸಿದೆ. ಈ ಕೊರತೆಯನ್ನು ನೀಗಿ ಆಹಾರದಲ್ಲಿ ಸ್ವಾವಲಂಬನೆಯನ್ನು ಸಾಧಿಸಲು ಸರಕಾರ ಪಂಚವಾರ್ಷಿಕ ಯೋಜನೆಗಳ ಮೂಲಕ ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ಅವುಗಳಲ್ಲಿ ಸಹಕಾರಿ ಸಾಗುವಳಿ ಬಹಳ ಮುಖ್ಯವಾದುದು. ಇದು ಆರ್ಥಿಕ ಉತ್ಪಾದನೆಗೆ ದಾರಿಮಾಡಿಕೊಡುತ್ತದೆ. ಸಹಕಾರಿ ಸಾಗುವಳಿಯು ಕಡಿಮೆ ಜಮೀನುಳ್ಳ ರೈತರಿಗೆ ವರಪ್ರಧಾನವಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಸಣ್ಣಪುಟ್ಟ ರೈತರು ತಮ್ಮ ತುಂಡು ಜಮೀನುಗಳನ್ನು ಒಂದುಗೂಡಿಸಿ ಒಟ್ಟಾಗಿ ಕೃಷಿಮಾಡಿ ಬೃಹದ್ಗಾತ್ರ ಪ್ರಮಾಣದ ಕೃಷಿಯ ಎಲ್ಲಾ ಅನುಕೂಲಗಳನ್ನು ಪಡೆಯುವುದು ಸಹಕಾರಿ ಸಾಗುವಳಿಯ ಮೂಲತತ್ವ, ರೈತರ ಆಸ್ತಿಯ ಹಕ್ಕುಗಳಿಗೆ ಯಾವ ರೀತಿಯಲ್ಲೂ ಧಕ್ಕೆ ಬಾರದಂತೆ, ಸಾಮೂಹಿಕ ಬೇಸಾಯದ ಫಲದೊರಕುವಂತೆ ಮಾಡುವುದು ಇದರಿಂದ ಸಾಧ್ಯ. ಈ ಪದ್ಧತಿಯಿಂದ ಅಂದರೆ ಕೃಷಿಕಾರ್ಯಗಳಿಗಾಗಿ ಭೂಮಿಯೆಲ್ಲವನ್ನೂ ಒಟ್ಟುಗೂಡಿಸಿ ಸಾಗುವಳಿ ಮಾಡಿದರೆ ಆಹಾರಧಾನ್ಯಗಳಲ್ಲಿ ಹೆಚ್ಚಿನ ಉತ್ಪತ್ತಿಯಾಗುವುದಲ್ಲದೆ ರೈತರ ಆರ್ಥಿಕ ಸ್ಥಿತಿಯೂ ಸುಧಾರಿಸುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಭದ್ರತೆಯೂ ಉತ್ತಮಗೊಳ್ಳುವುದಕ್ಕೆ ಸಹಾಯವಾಗುತ್ತದೆ. ಇಂದು ನಮ್ಮ ರೈತರು ಉಂಡುಟ್ಟು ಸುಖವಾಗಿರಬೇಕಾದರೆ, ಅವರ ತಾಪತ್ರಯಗಳ ನಿವಾರಣೆಯಾಬೇಕಾದರೆ, ಅವರ ಬಾಳು ಹಸನಾಗಿ ದೇಶದ ಉದ್ಧಾರವಾಗಬೇಕಾದರೆ ಸಹಕಾರಿ ಬೇಸಾಯ ಪದ್ಧತಿಯಿಂದ ಮಾತ್ರ ಸಾಧ್ಯ. ಏಕೆಂದರೆ ನಮ್ಮ ದೇಶದಲ್ಲಿ ಎಲ್ಲೆಲ್ಲೂ ಹೆಚ್ಚಾಗಿರುವ ತುಂಡು ಹೊಲಗಳಿಂದ ಕೃಷಿಯ ಮತ್ತು ರಾಷ್ಟ್ರದ ಪ್ರಗತಿ ಅಸಾಧ್ಯ. ಅಲ್ಲದೆ ತುಂಡು ಹೊಲದ ರೈತನದು ವೈಯಕ್ತಿಕ ಹೋರಾಟ ಈ ಹೋರಾಟದಲ್ಲಿ ಅವನು ಗೆಲ್ಲುವುದು ಬಹಳ ಕಷ್ಟ. ಮಹಾತ್ಮ ಗಾಂಧಿಯವರು ಒಂದೆಡೆ ಸಾಂದರ್ಭಿಕವಾಗಿ ಹೀಗೆ ಹೇಳಿದ್ದಾರೆ. "ನೂರು ತುಂಡುಗಳಲ್ಲಿ ಹಂಚಿಹೋಗಿರುವ ಭೂಮಿಯಲ್ಲಿ ಬೇಸಾಯ ಮಾಡುವುದಕ್ಕೆ ಬದಲು ನೂರು ಕುಟುಂಬಗಳು ಸಹಕಾರದ ತಳಹದಿಯ ಮೇಲೆ ಸಹಕಾರಿ ಸಾಗುವಳಿ ಕೈಗೊಂಡು

THE TIMES, August 20, 1985



Sree Shivakumara Swamiji of Siddaganga Mutt, near Tumkur, a scholar in Sanskrit, during his regular evening discourses

# A temple of learning

The Times of India News Service

TUMKUR

SREE Siddaganga, five km away from Tumkur, besides being a health resort, a tourist haunt and a pilgrim centre, is known for its rapidly expanding educational institutions.

In 1917, Siddaganga made a modest beginning with a Sanskrit *pathashaala*. It then had 100 students on its rolls. Exactly two decades later, the institution was elevated to a college and now has over 2,500 students, making it one of the biggest of its kind in the country An oriental research centre with a rare collection of books and other study material, has also completed 75 years of service

Siddaganga has become the nucleus of learning in the state with over 40 high schools, 12 Sanskrit schools, 70 colleges for arts, science, commerce education, engineering and pharmacy within its fold. The strength of the teaching staff is 950

The ageing Shivakumara Swamiji is the motivating force behind all the activities of the mutt

## NOTEWORTHY FEATURE

A noteworthy feature is accent on social service. For two days in a week, the students of these institutions are engaged in various works like agriculture, building constructions ect.

Most of the students hail from rural areas and are provided free boarding and lodging facilities. The total expenses, which amount to over 2 lakhs are met through public contributions

Every evening, mass prayers are organised followed by Sree Shivakamura Swamiji's discourses

With a view to promote the cultural interests of the students the institution brings out a monthly magazine called "Siddaganga" with articles on art, literature and dharma. Cultural festivals are organised thrice in a month The institution also runs a hospital, a printing press and has a spacious guest house

Eastablished by Gosala Siddewara Swamiji in the 15th century, this centre of learning has come a long way in imparting education to rural students.

ಬಂದ ಉತ್ಪನ್ನವನ್ನು ತಮ್ಮೊಳಗೆ ಹಂಚಿಕೊಳ್ಳುವುದು ಒಳ್ಳೆಯದು.' ಇದು ನಿಜಕ್ಕೂ ಸತ್ಯವಾದ ಮಾತು.

ಲಕ್ಷಣಗಳು :– ಸಹಕಾರಿ ಸಾಗುವಳಿಯು ಒಂದು ವಿಶಿಷ್ಟವಾದ, ಸ್ವತಂತ್ರವಾದ ಹಾಗೂ ಪ್ರಜಾಸತ್ತಾತ್ಮಕವಾದ ಒಂದು ಪದ್ಧತಿ. ಹಳ್ಳಿಯಲ್ಲಿರುವ ರೈತರು ಒಂದೆಡೆ ಕೂಡಿ ಸಹಕಾರ ಸಂಸ್ಥೆಯನ್ನು ಸ್ವಯಂಸ್ಫೂರ್ತಿಯಿಂದ ಸ್ಥಾಪಿಸಿಕೊಳ್ಳುವುದು ಇದರ ವೈಶಿಷ್ಟ್ಯ. ಈ ರೀತಿಯ ಸಹಕಾರಿ ಸಾಗುವಳಿ ಸಂಸ್ಥೆಯು ಮುಖ್ಯವಾಗಿ ಭೂಹೀನರ ಅಥವಾ ನಿರ್ಗತಿಕ ಚಿಕ್ಕ ಬೇಸಾಯಗಾರರ ಸಂಸ್ಥೆ. ಈ ಸಂಸ್ಥೆಗೆ ರೈತರೆಲ್ಲರೂ ತಮ್ಮ ಭೂಮಿ, ಎತ್ತುಗಳು ಹಾಗೂ ಕೃಷಿ ಉಪಕರಣಗಳನ್ನು ಕೊಡುತ್ತಾರೆ. ಸಂಸ್ಥೆಯು ಸಣ್ಣ ಸಣ್ಣ ಹಿಡುವಳಿಗಳನ್ನು ವೈಜ್ಞಾನಿಕವಾಗಿ ವಿಂಗಡಿಸಿ, ದೊಡ್ಡ ಹಿಡುವಳಿಗಳನ್ನಾಗಿ ಮಾಡಿ ಸಾಗುವಳಿ ಮಾಡುತ್ತದೆ. ಎಲ್ಲಾ ರೈತರೂ ಸಂಸ್ಥೆಯ ಹೊಲಗಳಲ್ಲಿ ದುಡಿದು ಗೊತ್ತುಪಡಿಸಿದ ಕೂಲಿಯನ್ನು ಪಡೆಯುತ್ತಾರೆ. ಬಂದ ಬೆಳೆಯನ್ನು ಸಹಕಾರಿ ಮಾರಾಟ ಸಂಸ್ಥೆಗಳ ಮೂಲಕ ಮಾರಾಟಮಾಡಿ ಬಂದ ಹಣದಲ್ಲಿ ಎಲ್ಲಾ ಖರ್ಚುಗಳನ್ನು ಕಳೆದು ಉಳಿದ ಲಾಭವನ್ನು ರೈತರೆಲ್ಲರೂ ಹಂಚಿಕೊಳ್ಳುತ್ತಾರೆ. ಈ ರೀತಿ ತುಂಡು ಹೊಲಗಳನ್ನು ಪಡೆದಿರುವ ರೈತರು ಒಂದೆಡೆ ಸೇರಿ ಒಟ್ಟಾಗಿ ಕೃಷಿಕಾರ್ಯಗಳನ್ನು ಕೈಗೊಂಡರೆ ಒಂಟ್ಯೊಂಟಿಗರಾಗಿ ಸಾಧಿಸಲಾಗದ್ದನ್ನು ಲೀಲಾಜಾಲವಾಗಿ ಸಾಧಿಸಬಲ್ಲರು. ನಮ್ಮ ದೇಶದಲ್ಲಿ ರೈತರು ತಮ್ಮ ಭೂಮಿಯನ್ನು ಒತ್ತೆ ಇಟ್ಟಾದರೂ ಜೀವನೋಪಾಯಕ್ಕಾಗಿ ಸಾಲ ಪಡೆಯುತ್ತಾರೆ. ಅನೇಕ ಸಂದರ್ಭಗಳಲ್ಲಿ ಅವರಿಗೆ ಹಾಗೆ ಮಾಡದೆ ಬೇರೆ ಮಾರ್ಗವೇ ಇರುವುದಿಲ್ಲ. ಸಾಲ ಹಿಂದಿರುಗಿಸುವುದು ಅವರಿಂದ ಅಸಾಧ್ಯವಾದಾಗ ಭೂಮಿಯ ಒಡೆತನ ರೈತರಿಂದ ಸಾಹುಕಾರರ ವಶವಾಗುತ್ತದೆ. ಆದರೆ ಸಹಕಾರಿ ಸಾಗುವಳಿ ಪದ್ಧತಿಯಲ್ಲಿ ಉತ್ಪತ್ತಿಯನ್ನು ಹೆಚ್ಚಿಸಲು ಸಣ್ಣ ಸಣ್ಣ ಹಿಡುವಳಿಗಳನ್ನು ಒಟ್ಟುಗೂಡಿಸಿದರೂ ಸಹ ಭೂಮಿಯ ಒಡೆತನದಲ್ಲಿ ಯಾವ ಬಗೆಯ ಪರಿವರ್ತನೆಯೂ ಆಗುವುದಿಲ್ಲ. ರೈತನ ವೈಯಕ್ತಿಕ ಒಡೆತನವನ್ನು ರದ್ದುಗೊಳಿಸದೆ ಬೃಹತ್ ಪ್ರಮಾಣದ ಸಾಗುವಳಿಯೂ ಎಲ್ಲ ಬಗೆಯ ಅನುಕೂಲಗಳನ್ನೂ ಮಾಡಿಕೊಡುತ್ತದೆ. ಸಹಕಾರಿ ಸಾಗುವಳಿ ಪದ್ಧತಿಯಲ್ಲಿ ಹೆಚ್ಚು ಹೆಚ್ಚು ನವೀನ ಉಪಕರಣಗಳನ್ನು ಉಪಯೋಗಿಸಿ ಆಧುನಿಕ ಕೃಷಿಯನ್ನು ಕೈಗೊಂಡು ಅಧಿಕ ಉತ್ಪತ್ತಿಯನ್ನು ಪಡೆಯಬಹುದು.

ಈ ಪದ್ಧತಿಯಲ್ಲಿ ಸಹಕಾರದ ತತ್ವಗಳನ್ನು ಅನುಸರಿಸುವುದಕ್ಕೆ ಹೆಚ್ಚು ಅವಕಾಶವಿರುತ್ತದೆ. ಸದಸ್ಯರ ದನಕರುಗಳಿಗೆ, ಯಂತ್ರೋಪಕರಣಗಳಿಗೆ ಸಹಕಾರಿ ಸಾಗುವಳಿ ಸಂಸ್ಥೆ ಬಾಡಿಗೆಯನ್ನು ಕೊಡುತ್ತದೆ. ಸದಸ್ಯರಿಗೆ ವಿದ್ಯೆ, ವೈದ್ಯಕೀಯ ಸೌಲಭ್ಯಗಳನ್ನೂ ಸಂಸ್ಥೆಯು ಒದಗಿಸುತ್ತದೆ.

ಸಹಕಾರಿ ಬೇಸಾಯ ಸಂಸ್ಥೆಗಳು ರೈತರಿಗೆ ವಿರಾಮ ಕಾಲದಲ್ಲಿ ಗ್ರಾಮೋದ್ಯೋಗ
ಳನ್ನು ಒದಗಿಸುತ್ತವೆ. ಇದರಿಂದ ಸಣ್ಣ ರೈತರ ಆದಾಯ ಹೆಚ್ಚಿ ಅವರ ಆರ್ಥಿಕಸ್ಥಿತಿ
ುಧಾರಿಸುವುದಲ್ಲದೆ ರಾಷ್ಟ್ರವು ಆಹಾರದಲ್ಲಿ ಸ್ವಾವಲಂಬಿಯಾಗಿ ಆರ್ಥಿಕ ಅಭಿವೃದ್ಧಿ
ಯನ್ನು ಸಾಧಿಸುವುದು ಸಾಧ್ಯವಾಗುತ್ತದೆ.

**ಬಗೆಗಳು:** ಸಹಕಾರಿ ಸಾಗುವಳಿಯಲ್ಲಿ ಪ್ರಮುಖವಾಗಿ ನಾಲ್ಕು ಬಗೆಗಳಿವೆ.
ವು ಯಾವುವೆಂದರೆ 1] ಸಾಮೂಹಿಕ ಸಾಗುವಳಿ. 2] ಸಹಕಾರಿ ಸುಧಾರಿತ
ೇಸಾಯ. 3] ಸಹಕಾರಿ ಲಾವಣಿ ಸಾಗುವಳಿ. 4] ಸಹಕಾರಿ ಜಂಟಿ ಸಾಗು
ಳಿ.

1) **ಸಾಮೂಹಿಕ ಸಾಗುವಳಿ:** ಈ ಪದ್ಧತಿಯಲ್ಲಿ ರೈತರು ಭೂಮಿಯ
ಮೇಲಿನ ತಮ್ಮ ಒಡೆತನದ ಹಕ್ಕನ್ನು ಬಿಟ್ಟುಕೊಟ್ಟು, ತಮ್ಮ ಯಂತ್ರೋಪಕರಣ
ಳನ್ನು, ದನಕರುಗಳನ್ನು ಒಟ್ಟುಗೂಡಿಸಿ ಸಾಮೂಹಿಕವಾಗಿ ಸಾಗುವಳಿಯಲ್ಲಿ ನಿರತ
ಾಗುತ್ತಾರೆ. ಈ ಬಗೆಯಲ್ಲಿ ಭೂ ಹಿಡುವಳಿಯ ಗಾತ್ರಗಳನ್ನು ಹೆಚ್ಚಿಸುವುದರಿಂದ
ಉತ್ಪಾದನೆಯನ್ನು ಅಧಿಕಗೊಳಿಸಬಹುದು. ಈ ಪದ್ಧತಿಯಲ್ಲಿ ರೈತರು ಸಲ್ಲಿಸುವ
ಮದ ಪ್ರಮಾಣಕ್ಕನುಸಾರವಾಗಿ ಭೂಮಿಯ ಉತ್ಪಾದನೆಯನ್ನು ಹಂಚಲಾಗುತ್ತದೆ.
ಾಮೂಹಿಕ ಸಾಗುವಳಿ ಪದ್ಧತಿಯು ಕಮ್ಯೂನಿಸ್ಟ್ ರಾಷ್ಟ್ರವಾದ ರಷ್ಯದೇಶದಲ್ಲಿ
ುಶಸ್ವಿಯಾಗಿದೆ. ಆದರೆ ನಮ್ಮ ದೇಶದಲ್ಲಿ ಇದನ್ನು ಆಚರಣೆಗೆ ತರಲು ಸಾಧ್ಯವಿಲ್ಲ.
ಕೆಂದರೆ ಭಾರತ ಪ್ರಜಾಪ್ರಭುತ್ವದ ರಾಷ್ಟ್ರ. ಆದ್ದರಿಂದ ಇಲ್ಲಿ ಸಹಕಾರಿ ಸಾಗುವಳಿ
ದ್ಧತಿಯನ್ನು ಆಚರಣೆಗೆ ತರಲಾಗಿದೆ.

2) **ಸಹಕಾರಿ ಸುಧಾರಿತ ಬೇಸಾಯ:** ಈ ಪದ್ಧತಿಯಲ್ಲಿ ಸದಸ್ಯರು
ಮ್ಮ ಭೂಮಿ ಹಾಗೂ ಸಲಕರಣೆಗಳನ್ನು ಸಹಕಾರಿ ಸಂಸ್ಥೆಗೆ ಒಪ್ಪಿಸದೆ; ಹಣಕಾಸು,
ೀಜ, ಗೊಬ್ಬರ ಇತ್ಯಾದಿಗಳನ್ನು ಸಂಸ್ಥೆಯಿಂದ ಸ್ವತಃ ಪಡೆದು ವೈಯಕ್ತಿಕವಾಗಿ
ಮ್ಮ ಭೂಮಿಯ ಸಾಗುವಳಿಯನ್ನು ಕೈಗೊಳ್ಳುತ್ತಾರೆ.

3) **ಸಹಕಾರಿ ಲಾವಣಿ ಸಾಗುವಳಿ:** ಈ ಪದ್ಧತಿಯಲ್ಲಿ ಸಹಕಾರ
ಂಸ್ಥೆಯು ತಾನು ಪಡೆದಿರುವ ಭೂಮಿಯನ್ನು ಹಲವು ವಿಭಾಗಗಳನ್ನಾಗಿ ಮಾಡಿ
ದಸ್ಯರಿಗೆ ಉತ್ಪಾದನೆಗಾಗಿ ಹಂಚುತ್ತದೆ. ಅವರಿಗೆ ಬೀಜ, ಗೊಬ್ಬರಗಳನ್ನು ತಾನೇ
ದಗಿಸುತ್ತದೆ. ಬಂದ ಉತ್ಪತ್ತಿಯನ್ನೂ ತಾನೇ ಸ್ವತಃ ಮಾರಾಟಮಾಡುತ್ತದೆ.

4) **ಸಹಕಾರಿ ಜಂಟಿ ಸಾಗುವಳಿ:** ಈ ಪದ್ಧತಿಯಲ್ಲಿ ಸದಸ್ಯರು ತಮ್ಮ
ೂಮಿಯನ್ನು ಒಟ್ಟುಗೂಡಿಸಿ, ಆ ಭೂಮಿಯನ್ನು ಉತ್ಪಾದನೆಯ ಒಂದೇ ಘಟಕ
ಂದು ಭಾವಿಸಿ ಒಟ್ಟಿಗೆ ಸಾಗುವಳಿ ಕೈಗೊಳ್ಳುತ್ತಾರೆ. ಈ ಬಗೆಯ ಸಂಸ್ಥೆಗಳಿಗೆ ಸಹ
ಾರಿ ಕೂಡು [illegible] ಅಥವಾ ಜಂಟಿ ಸಾಗುವಳಿ ಎನ್ನುತ್ತಾರೆ. [45ನೇ ಪುಟ ನೋಡಿ]

ಪ್ರಕಟಣೆ ೨

# ಶ್ರೀ ಸಿದ್ಧಗಂಗಾ ಮಠದ ಆಶ್ರಯದಲ್ಲಿ, ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ ಇಲಕಲ್ಲ, ಅವರ ಶರಣ ಸಿದ್ಧಾಂತ ವಿದ್ಯಾಪೀಠದ 8ನೆಯ ಶಿವಾನುಭವ ತರಬೇತಿ ಶಿಬಿರದ ವಿವರಗಳು.

ಶಿಬಿರದ ಅವಧಿ – 24-10-85ರಿಂದ 30-10-85ರವರೆಗೆ.

ಶಿಬಿರ ನಡೆಯುವ ಸ್ಥಳ – ಶ್ರೀ ಸಿದ್ಧಗಂಗಾ ಮಠ ತುಮಕೂರು ಜಿಲ್ಲೆ.

## ಶಿಬಿರದಲ್ಲಿ ನಡೆಯಲಿರುವ ವಿಶೇಷ ಕಾರ್ಯಕ್ರಮಗಳು ಮತ್ತು ಗೋಷ್ಠಿಗಳು.

1. ಉದ್ಘಾಟನೆ – 24-10-85 ಘಂಟೆ ಬೆಳಿಗ್ಗೆ 8-00ಕ್ಕೆ
2. "ಶಿವಾನುಭವ ಕ್ರಾಂತಿ" ಗೋಷ್ಠಿ – 24-10-85 ಸಂಜೆ 6-00ಕ್ಕೆ
3. "ಶರಣರ ಜೀವನ ದೃಷ್ಟಿ"-ಗೋಷ್ಠಿ – 25-10-85 —"—
4. "ರಾಜಕಾರಣಿಗಳ ಕರ್ತವ್ಯಗಳು-ಗೋಷ್ಠಿ – 28-10-85 —"—
5. "ಮಠಾಧಿಪತಿಗಳ ಕರ್ತವ್ಯಗಳು"-ಗೋಷ್ಠಿ - 29-10-85 —"—
6. ಮುಕ್ತಾಯ ಸಮಾರಂಭ – 30-10-85 ಮಧ್ಯಾಹ್ನ–3-00ಕ್ಕೆ

ರಾತ್ರಿ 10-00 ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ.

ತಮಗೆಲ್ಲ ಆದರದ ಸುಸ್ವಾಗತ

## ಬಸವ ಜಯಂತಿ ಸಮಾರೋಪ ಸಮಾರಂಭ– 1985

26-10-85 ಮತ್ತು 27–10-85
ಬಸವತತ್ವ ಗೋಷ್ಠಿಗಳು ಪರಮಪೂಜ್ಯ ಶ್ರೀ ಶ್ರೀ ಗಳವರ
ಅಧ್ಯಕ್ಷತೆಯಲ್ಲಿ ಜರುಗುತ್ತವೆ.

ಪ್ರಥಮ ಅಧಿವೇಶನ – 26-10-85 – ಕಾಲ ಬೆಳಗ್ಗೆ 9 ಘಂಟೆಗೆ

ಉದ್ಘಾಟನೆ :- ಶ್ರೀಮಾನ್. ಬಿ. ಡಿ. ಜತ್ತಿಯವರು. ಮಾಜಿ ಉಪರಾಷ್ಟ್ರಪತಿ
ಮತ್ತು ಬಸವಸಮಿತಿ ಅಧ್ಯಕ್ಷರು.

ಉಪನ್ಯಾಸ :- ಪೂಜ್ಯ ಶ್ರೀ ಶ್ರೀ ಗೌರಿಶಂಕರ ಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠ
ಶ್ರೀಮತಿ ಕಲ್ಯಾಣಮ್ಮ ಲಂಗೋಟಿ, ರಾಮದುರ್ಗ.

ದ್ವಿತೀಯ ಅಧಿವೇಶನ – 26-10-85 – ಕಾಲ ಮಧ್ಯಾಹ್ನ 3 ಘಂಟೆಗೆ

ಉಪನ್ಯಾಸ :- ಶ್ರೀ ಟಿ.ಎಸ್. ಪಾಟೀಲ್, ದಾವಣಗೆರೆ.
ಶ್ರೀ ಜಿ ಎಸ್. ಸಿದ್ಧಲಿಂಗಯ್ಯ, ಬೆಂಗಳೂರು.

ತೃತೀಯ ಅಧಿವೇಶನ – 27-10-85 ಕಾಲ ಬೆಳಗ್ಗೆ 9 ಘಂಟೆಗೆ

ಉಪನ್ಯಾಸ :- ಡಾ। ಹೆಚ್. ತಿಪ್ಪೇರುದ್ರಸ್ವಾಮಿಗಳು, ಮೈಸೂರು.
ಡಾ। ಎಂ.ಎಸ್. ಕೃಷ್ಣಮೂರ್ತಿಗಳು, ಮೈಸೂರು.

ಚತುರ್ಥ ಅಧಿವೇಶನ – 27-10-85 ಕಾಲ ಮಧ್ಯಾಹ್ನ 3-00 ಘಂಟೆಗೆ

ಉಪನ್ಯಾಸ :- ಶ್ರೀ ವಿ ವಿ ಸಂಗಮದ, ರಾಣೆಬೆನ್ನೂರು.
ಶ್ರೀ ಸಿದ್ಧಣ್ಣ ಲಂಗೊಟಿ, ರಾಮದುರ್ಗ.

ನಾಲ್ಕೂ ಅಧಿವೇಶನಗಳ ಅಧ್ಯಕ್ಷತೆಯನ್ನು ಪರಮಪೂಜ್ಯ ಶ್ರೀ ಶ್ರೀ ಗಳವರು
ವಹಿಸಲು ಕೃಪೆಮಾಡಿ ಒಪ್ಪಿರುತ್ತಾರೆ.

ತಾ॥ 30-10-85 ರಂದು ರಾತ್ರಿ 10 ಘಂಟೆಗೆ "ಜಗಜ್ಯೋತಿ ಬಸವೇಶ್ವರ"
ನಾಟಕ. ತಮಗೆಲ್ಲ ಆದರದ ಸುಸ್ವಾಗತ.

---

ಈ ಎಲ್ಲಾ ಪದ್ಧತಿಗಳ ಮುಖ್ಯ ಉದ್ದೇಶ, ಭೂಮಿಯ ವಿಸ್ತೀರ್ಣವನ್ನು ಹೆಚ್ಚಿಸುವುದರ ಮೂಲಕ ಆಧುನಿಕ ಉಪಕರಣಗಳನ್ನು ಬಳಸಿ ಅಧಿಕ ಉತ್ಪಾದನೆ ಪಡೆಯುವುದು.

[ಮುಂದುವರಿಯುತ್ತದೆ]

# ಹಳೆಯ ವಿದ್ಯಾರ್ಥಿಗಳ ಸಂಘಕ್ಕೆ 'ಶಾಶ್ವತ' ಸದಸ್ಯತ್ವ ಪಡೆದಿರುವವರು

**ಸರ್ವಶ್ರೀ:**

129 ಬಿ. ಎಸ್. ಚಂದ್ರಶೇಖರಯ್ಯ, ಸಹಾಯಕ ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು ಸಿದ್ಧಗಂಗಾ ಮಠ.

130 ಕೆ. ಸಿ. ಚಂದ್ರಶೇಖರಯ್ಯ, ಉಪಧ್ಯಾಯರು, ಎಸ್. ಎಸ್. ಆರ್. ಹೆಚ್. ಎಸ್., ಎಂ. ಎನ್. ಕೋಟೆ, ಗುಬ್ಬಿ ತಾಲ್ಲೋಕ್.

131 ಎಂ. ಶಿವಣ್ಣ, ನಿವೃತ್ತ ಉಪಧ್ಯಾಯರು, ನಂದೀಹಳ್ಳಿ, ತುಮಕೂರು ತಾಲ್ಲೋಕ್.

132 ವಿ. ಎಸ್. ಶಾಂತಮಲ್ಲಪ್ಪ, ಬಟ್ಟೆ ವ್ಯಾಪಾರಿಗಳು, ಒಡೆಯರ ಪಾಳ್ಯ, ಕೊಳ್ಳೇಗಾಲ ತಾಲ್ಲೋಕ್.

133 ಸಿ. ಎಸ್. ರಾಮದಾಸ್, ಆರೋಗ್ಯ ಇಲಾಖೆ, ಸೋಮೇಶ್ವರ ಪುರಂ, ತುಮಕೂರು.

134 ಎಂ. ನಾರಾಯಣಸ್ವಾಮಿ, ಉಪಾಧ್ಯಾಯರು, ವರಹುಣಸೇನಹಳ್ಳಿ, ಸಿಡ್ಲಗಟ್ಟ ತಾಲ್ಲೋಕ್.

135 ಕೆ. ಎಲ್. ಸಿದ್ಧಲಿಂಗಯ್ಯ, ಉಪಾಧ್ಯಾಯರು, ಸರೋವರ ಬೀದಿ, ದೇವನಹಳ್ಳಿ.

136 ಬಿ. ಸಿ. ನಂಜಪ್ಪ, ಕೆ. ಆರ್. ಪುರಂ, ಹಾಸನ.

137 ಬಿ. ಎ. ಗುರುಮೂರ್ತಿ, ಶಿವಕೃಪ ಟ್ರಾನ್ಸ್‌ಪೋರ್ಟ್, ಸಕಲೇಶಪುರ ಟೌ.

138 ವಿ. ಪಿ. ಗಂಗಣ್ಣ, ಸಿದ್ಧರಾಮ ಕೃಪ, ಸಿದ್ಧಗಂಗಾ ಹೈಸ್ಕೂಲ್ ಬಡಾವಣೆ, ತುಮಕೂರು.

139 ಸಿ. ರುದ್ರಯ್ಯ, ನಿವೃತ್ತ ಉಪಾಧ್ಯಾಯರು, ಪಾಲನಹಳ್ಳಿ, ಮಾಗಡಿ ತಾ||.

140 ಎಂ. ಜಿ. ಸಿದ್ದರಾಮಯ್ಯ, ಉಪಾಧ್ಯಾಯರು, ಎಸ್. ಎಸ್. ಆರ್. ಹೆಚ್. ಎಸ್., ಸಿದ್ಧಗಂಗಾ ಮಠ.

141 ಎಂ. ಶಿವರುದ್ರಯ್ಯ, ಕ್ಯಾಂಟೀನ್ ಸೂಪರ್ ವೈಸರ್, ಬಿ ಇ.ಎಲ್. ಕಾಲೋನಿ, ಬೆಂಗಳೂರು-560013.

(ಮುಂದುವರಿಯುತ್ತದೆ)

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ತೋಟಗೆರೆ, ಹೆಸರುಘಟ್ಟಕ್ಕೆ ಮೂರು ಮೈಲಿ. ಗೊಲ್ಲಹಳ್ಳಿ ಮಾರ್ಗ, ವ್ಯಾಸ ಮಹರ್ಷಿಗಳು ವಾಸಮಾಡಿದ್ದರಿಂದ 'ವ್ಯಾಸರ ಘಟ್ಟ'ವಾಯಿತು, ಅಪಭ್ರಂಶಗೊಂಡು ಹೆಸರು ಘಟ್ಟವೆಂದು ಪ್ರಸಿದ್ಧಿಯಾಯಿತು. ವ್ಯಾಸರಿಂದ ನಿರ್ಮಿಸಿದ ತೋಟ 'ತೋಟಗೆರೆ'ಯಾಯಿತು. ಅಲ್ಲೊಂದು ಶಿವಾಲಯ, ರಸ್ತೆ ಬದಿಗೇ ಇದೆ. ಸೊಂಪಾದ ನೆರಳು ನೀಡುವ ಆಲದಮರ. ಅಲ್ಲಿ ಬಸವ ತತ್ವಗಳ ಪ್ರಚಾರ, ಬಸವ ಜಯಂತಿಯ ಆಚರಣೆ ತಾ|| 15-4-1985 ರ ಸೋಮವಾರ. ಸಮಾರಂಭದ ಕಾರ್ಯಕರ್ತರು ಶ್ರೀ ಆರ್. ಬಿ. ಚೆನ್ನಬಸವಾರಾಧ್ಯರು. ಸಹಾಯಕ್ಕೆ ನಿಂತವರು ಕುಕ್ಕನಹಳ್ಳಿಯ ಶ್ರೀ ಸಿದ್ಧಬಸವಯ್ಯ ಮತ್ತಿತರ ಗ್ರಾಮೀಣ ಬಂಧುಗಳು. ಪರಮ ಪೂಜ್ಯರನ್ನು ಮಂಗಳ ವಾದ್ಯದೊಂದಿಗೆ ಸ್ವಾಗತಿಸಿದರು. ಸಭಾಮಂಟಪಕ್ಕೆ ಕಾರ್ಯಕ್ರಮಗಳು ವಿಧಿವತ್ತಾಗಿ ನಡೆದುವು.

ಶರಣರು ಪ್ರಾತಃಸ್ಮರಣೀಯರು, ಪವಿತ್ರಾತ್ಮರು, ಜಾಗೃತ ಚೇತನರು ಕ್ರಿಯಾಶೀಲ ಸಮಾಜ ರೂಪಿಸಿದ ರೂವಾರಿಗಳೆಂದು ಶ್ರೀ ಎಸ್. ಎಂ. ಭಾಸ್ಕರಾಚಾರ್ ಅವರು ನುಡಿದರು. ಶ್ರೀ ಈಶ್ವರಪ್ಪನವರು ಕಸ ಇದ್ದ ಕಡೆ ಬಸವ ಬಂದ ಹಸನು ಮಾಡಿದ "ಅಗ್ನಿ ಖಡ್ಗವ ಹಿಡಿದ ಕ್ರಾಂತಿ ವೀರ" ಆ ಮಹಾನುಭಾವನೆಂದರು. ಶ್ರೀ ಕೆ. ಪಿ ಶಿವಲಿಂಗಯ್ಯನವರು. ವಚನಗಳಲ್ಲಿ ಕಾಣಬರುವ ಸಾಮಾಜಿಕ ಬಸವಣ್ಣನವರ ವ್ಯಕ್ತಿತ್ವವನ್ನು ವಿವರಿಸಿದರು. ನೆಲಮಂಗಲದ ಪವಾಡದ ಬಸವಣ್ಣ ದೇವರ ಮಠದ ಪೂಜ್ಯ ಶ್ರೀ ಸದಾಶಿವ ಸ್ವಾಮಿಗಳು ಬಸವ ತತ್ವಗಳನ್ನು ಕೇವಲ ಭಾಷಣ ಮಾಡಿದರೆ ಸಾಲದು, ಬದುಕಿನಲ್ಲಿ ಆಚರಣೆಗೆ ಬರಬೇಕು ಎಂದು ನುಡಿದರು. ಜನಪದ ಸಂಸ್ಕೃತಿಯಲ್ಲಿ ಅರಳಿದ ಅಣ್ಣ ಬಸವಣ್ಣನವರನ್ನು ಹಾಡುಗಳ ಮೂಲಕ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಚಿತ್ರಿಸಿದರು.

"ಊಟ ದಿನವಹಿ ಮಾಡುತ್ತೇವೆ. ಆದರೆ ಜ್ಞಾನದ ಊಟ ಇಂದು ಮಾಡುವ ಪ್ರಯತ್ನ ನಮ್ಮದಾಗಬೇಕು". ಶ್ರದ್ಧೆಯಿಂದ ಕೇಳಿದ ಯಾವ ಮಾತೂ ನಿರರ್ಥಕವಾಗುವುದಿಲ್ಲ. ಜೀವನ ಒಂದು ಮಾಣಿಕ್ಯ, ಆ ಮಾಣಿಕ್ಯದ ಬೆಲೆ ತಿಳಿಯಬೇಕಾದರೆ ಮಹಾನುಭಾವರ ಜೀವನ ನಮಗೆ ದಾರಿದೀಪ. ದೇವನನ್ನು ನಂಬಿ ಮಾಡಿದ ಯಾವ

ಕೆಲಸವೂ ವ್ಯರ್ಥವಾಗುವುದಿಲ್ಲ. ಮನುಷ್ಯ ವಿವೇಕಿಯಾಗಿ ಜೀವಿಸಬೇಕು. "ಸ್ವ ಬುದ್ಧಿಯಲ್ಲಿ, ಬಲ್ಲಿದರ ಮಾತು ಕೇಳುವುದಿಲ್ಲ" ಎಂಬಂತಾಗಬಾರದು. ಮಾಡಿ ಪಾಪಕ್ಕೆ ಕುರುಡು ಆಚರಣೆಗೆ ಬಲಿಯಾಗುವುದು ತಪ್ಪು. ಒಂದು ಚಿನ್ನದ ಹ ಯನ್ನೋ, ಬೆಳ್ಳಿಯ ಗೋವನ್ನೋ, ಪಂಚಲೋಹದ ಮೂರ್ತಿಯನ್ನೋ, ಲ ದೀಪೋತ್ಸವವನ್ನೋ, ಹುಂಡಿ ಕಾಣಿಕೆಯನ್ನೋ ನೀಡುವುದರ ಮೂಲಕ ಮಾಡಿ ಪಾಪ ಪರಿಹಾರವಾಗುವುದಿಲ್ಲ. ಭಕ್ತಿಯಿಂದ, ಶುದ್ಧ ಮನಸ್ಸಿನಿಂದ, ಏಕ ನಿ ಯಿಂದ ದೇವರ ಸ್ಮರಣೆ ಮಾಡಿದರೆ ಸಾಕು. "ಪಾತಕ ಕೋಟಿಯನೊರೆಸಲು ಸಾಲ ಒಂದು ಶಿವನ ನಾಮ" ಎಂಬ ಬಸವಣ್ಣನವರ ಮಾತು ನಮಗೆ ದಾರಿದೀಪವಾಗಬೇಕ ಎನ್ನುತ್ತ ಪರಮ ಪೂಜ್ಯ ಶ್ರೀ ಶ್ರೀಗಳವರು ಸಿದ್ಧಗಂಗಾ ಮಠದ ಅಭಿವೃದ್ಧಿ ಬಡವರ ಕೊಟ್ಟ ಕಾಣಿಕೆಯಿಂದಾದು. ಭಕ್ತಿಯಿಂದರ್ಪಿಸಿದ "ಪಾವು ರಾಗಿ, ಒಂದು ಪಾವಲಿ ಯಿಂದಾದು ಎಂದು ಆಶೀರ್ವಚನ ಮಾಡಿದರು.

ಬಸವ ಜಯಂತಿ ಆಚರಿಸಿದ ಸ್ಮರಣಾರ್ಥವಾಗಿ ಪ್ರೌಢಶಾಲೆಯೊಂದನ್ನು ಶ್ರಿ ಚೆನ್ನ ಬಸವಾರಾಧ್ಯರ ಉದಾರ ದಾನದಿಂದ ಮತ್ತು ಶಾಲೆಯ ನಿರ್ಮಾಣಕ್ಕೆ ಸ್ಥ ದಾನಮಾಡಲು ಮುಂದೆ ಬಂದ ಶ್ರೀ ಬಸಪ್ಪನವರ ಸಹಕಾರದಿಂದ ಜಯಘೋಷ ದೊಂದಿಗೆ ನಿರ್ಣಯಿಸಲಾಯಿತು. (ಸರ್ಕಾರಿದ ಮಂಜುರಾತಿಯೂ 1985–86 ರಲ್ಲೀ ಶಾಲಾ ಸ್ಥಾಪನೆಗೆ ದೊರೆಯಿತು ವಿಳಂಬವಾಗಿ. ಪರಿಣಾಮವಾಗಿ 1986–87ರ ಶೈಕ್ಷಣಿಕ ವರ್ಷದಿಂದ ಪ್ರೌಢಶಾಲೆ ಪ್ರಾರಂಭ ಮಾಡುವುದೆಂದು ಪೂಜ್ಯಪಾದರು ಆಶೀರ್ವದಿಸಿದರು ಇತ್ತೀಚಿಗೆ).

ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನವಾಯಿತು. ನೆಲಮಂಗಲದಿಂದ, ಹೆಸರುಘಟ್ಟದಿಂದ, ಗೊಲ್ಲಹಳ್ಳಿಯಿಂದ, ಕುಕ್ಕನಹಳ್ಳಿಯಿಂದ ಬಂದ ಜನಸ್ತೋಮಕ್ಕೆ ಬಯಲು ಚಿಕ್ಕದಾಯಿತು. ನಾಟಕ ಮಳೆಬಂದರೂ ಅಡ್ಡಿಯಿಲ್ಲದೆ ನಡೆದು ಪವಾಡವೇ ಜರುಗಿದಂತಾಯಿತು. "ಮಹಾನುಭಾವನ ಕಥೆ, ಮಹಾ ಸ್ವಾಮಿಗಳ ಸೇವೆ ಅಂದ ಮೇಲೆ ಕೇಳೋದೇನಿದೆ, ಎಲ್ಲ ಸುಸೂತ್ರವಾಗಲೇ ಬೇಕಾಗಿದೆ?"–ಎಂದ ವೃದ್ಧ ರೊಬ್ಬರು ಶ್ರೀ ಶ್ರೀಗಳವರ ಚರಣ ದಿವ್ಯಗಳಿಗೆ ಹಣೆಮಣಿದು ನಿಂತರು. ಮಂಗಳ ವಾದಾಗ ಪೂರ್ವದ ದಿಗಂತದ ಕೆಂಬಣ್ಣ ಸೋರಿ "ಸ್ವಾಮಿ ನನ್ನಯ್ಯ ರಥವೇರಿ" ಬರು ತ್ತಿದ್ದ. ಸ್ವಾಮಿಗಳ ಕಾರು ಸಿದ್ಧಗಂಗಾ ಕಮ್ಮಟದ ಕಡೆಗೆ ಧಾವಿಸಿತ್ತು.

‡‡ ‡‡ ‡‡

17–4–85 ಬ್ಯಾಡಗೆರೆ ಗುಬ್ಬಿ ತಾಲ್ಲೂಕು ಬಸವ ಜಯಂತಿಗೆ ತನ್ನನ್ನೂ ಅರ್ಪಿಸಿಕೊಂಡ ಗ್ರಾಮ. ಅಡಿಕೆ, ತೆಂಗು, ಎಲೆಬಳ್ಳಿ ತೋಟಗಳ ಆಗರ. ಪರಮ ಪೂಜ್ಯರ ಆಗಮನ ಸ್ವಾಗತ ಕಾರ್ಯಕ್ರಮ ಪ್ರಾರಂಭ.

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಚಕ್ರಬಾವಿ ಮಠ, ಅವರಿಂದ ಬಸವಣ್ಣನವರ ಜೀವನದಿಂದ ಸ್ವಾಮಿಗಳವರು ತಿಳಿಯಬೇಕಾದದು ಅಪಾರವಾಗಿದೆ. ಮಠಗಳು, ಮಠಾಧಿಪತಿಗಳು ಭಕ್ತ ಸಮೂಹಕ್ಕೆ ತನ್ನನ್ನು ಅರ್ಪಿಸಿಕೊಂಡಾಗಲೇ ಅರ್ಥಪೂರ್ಣ, ಸಿದ್ಧಗಂಗಾ ಪರಮಪೂಜ್ಯರು ಬಸವ ತತ್ವಗಳು ಗ್ರಾಮೀಣ ಬಂಧು ಭಗಿನಿಯರಲ್ಲಿ ಪ್ರಚಾರವಾಗಬೇಕು ಎಂಬ ಸದುದ್ದೇಶದಿಂದ ಹಳ್ಳಿ ಹಳ್ಳಿಗೆ, ಹಗಲು ರಾತ್ರಿಗಳನ್ನೂ ಲೆಕ್ಕಿಸದೆ, ಶ್ರಮವರಿಯದೆ, ಖರ್ಚುವೆಚ್ಚಗಳನ್ನು ತಾವೇ ಪೂರೈಸುತ್ತಾ ಬಸವ ಸೇವಾ ಮಹಾ ಯಾತ್ರೆಯನ್ನೇ ಕೈಗೊಂಡಿದ್ದಾರ. ಧನ್ಯ ಬ್ಯಾಡಗೆರೆ ಎಂಬು ದಾಗಿ ನುಡಿದರು. ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಮ್ಯಾನೇಜರ್‌ರವರಾದ ಶ್ರೀ ನಂಜಪ್ಪನವರು ಮಾತನಾಡುತ್ತ, ಪರಮ ಪೂಜ್ಯ ಶ್ರೀ ಶ್ರೀಗಳವರು ಅಗಾಧ ಸೇವೆ ಯನ್ನು ಶಿಕ್ಷಣ ಸಂಸ್ಥೆಗಳ ಮೂಲಕ ನಡೆಸಿದ್ದಾರೆ, ಒಂದು ಪಕ್ಷ ಸಿದ್ಧಗಂಗಾ ಮಠದ ಆಶ್ರಯವಿಲ್ಲದೇ ಹೋಗಿದ್ದರೆ ಇಡೀ ತುಮಕೂರು ಜಿಲ್ಲೆ ಅವಿದ್ಯಾ ಕತ್ತಲಿನಲ್ಲಿ ತೊಳ ಲಾಡಬೇಕಾಗಿತ್ತು, ನಮ್ಮ ಭಾಗ್ಯ ತ್ರಿವಿಧ ದಾಸೋಹ ಮೂರ್ತಿಗಳಾದ ಶ್ರೀ ಶ್ರೀಗಳ ವರ ಆಳವರಿಯದ ಸೇವಾಫಲವಾಗಿ ಇಂದು ಇಡೀ ಜಿಲ್ಲೆ ವಿದ್ಯಾಕ್ಷೇತ್ರದಲ್ಲಿ ಪ್ರಗತಿಪಥ ದಲ್ಲಿ ನಡೆದಿದೆ. ಇಷ್ಟು ಸಾಲದೆಂಬಂತೆ, ಗ್ರಾಮಾಂತರ ಬಸವ ಜಯಂತಿ ಆಚರಣೆ ಮೂಲಕ ಗ್ರಾಮೀಣ ಬಂಧುಗಳ ಸೇವೆಗೆ ತೊಡಗಿದ್ದಾರೆ–ಎಂದರು. ಸಭೆಯಲ್ಲಿ ಶ್ರೀ ಎಸ್. ಎಂ. ಭಾಸ್ಕರಾಚಾರ್‌ರವರು ಉಪನ್ಯಾಸ ಮಾಡುತ್ತ "ಹೃದಯ ಕ್ಷೇತ್ರ ವನ್ನು ಹಸನು ಮಾಡಿಕೊಳ್ಳುವುದನ್ನು ಕಲಿಸಿದ ಪುಣ್ಯಜೀವಿ ಬಸವಣ್ಣ" 'ಎನ್ನ ಚಿತ್ತವು ಅತ್ತಿಯಹಣ್ಣು ನೋಡಯ್ಯ'–ಎಂದೇ ನುಡಿದರು ಬಸವಣ್ಣ. ರಾಜಕಾರಣಿ ಗಳು, ಸ್ತ್ರೀಯರು, ಧರ್ಮಗುರುಗಳು ಇಂದು ಬಸವಣ್ಣನನ್ನು ಅಗತ್ಯವಾಗಿ ಅರ್ಥ ಮಾಡಿಕೊಳ್ಳಬೇಕಾಗಿದೆ ಆ ಪವಿತ್ರ ಪ್ರಯತ್ನದ ಮಹಾ ಮಾದರಿಯೆಂಬಂತೆ ಸಿದ್ಧ ಗಂಗಾ ಮಹಾಸ್ವಾಮಿಗಳು ಕರ್ನಾಟಕದ ಹಳ್ಳಿಹಳ್ಳಿಗಳಲ್ಲಿ ಬಸವ ಜಯಂತಿ ಆಚರಣೆ ನಡೆಸಿದ್ದಾರೆ. ದೊಡ್ಡವರನ್ನು ಅರ್ಥ ಮಾಡಿಕೊಳ್ಳಲು ದೊಡ್ಡವರಿಗೆ ಸಾಧ್ಯ ಅಲ್ಲವೆ? ಶ್ರಮ ಸ್ವಾಮಿಗಳಿಗೆ, ಅದರ ಫಲ ನಮಗೆ–ಎಂದು ನುಡಿದರು. ನಿಷ್ಕಲ್ಮಷವಾದ, ಮುಗ್ಧವಾದ, ಸರಳ ಸುಂದರವಾದ, ಬಸವಣ್ಣ ಜನಪದ ಗರತಿಯರ ಹಾಡಿನಲ್ಲಿದ್ದಾನೆ. ಗರತಿಯರ, ಗ್ರಾಮಸ್ತರ ಹೃದಯ ತುಂಬಿದ್ದಾನೆ ಎಂದು ಹಾಡಿದರು ಶ್ರೀ ಹೆಚ್. ವಿ ವೀರಭದ್ರಯ್ಯನವರು.

ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತ ಭಗವಾನ್ ಬಸವಣ್ಣ ನವರು ಕೇವಲ ಒಂದು ಜಾತಿಯ, ಒಂದು ವರ್ಗದ, ಒಂದು ದೇಶದ, ಒಂದು ಕಾಲದ ವ್ಯಕ್ತಿಯಲ್ಲ, ಅವರು ವಿಶ್ವಬಂಧು, ವಿಶ್ವಮಾನವರು ಅವರು ಮಾಡಿದ ಮಹಾ ಸೇವೆ ಹರಿಜನರ ಉದ್ಧಾರ. ಅವರು ಮಾಡಿದ ಹಾಗೆ ಇಂದೂ ಈ ಇಪ್ಪತ್ತನೆಯ ಶತಮಾನದಲ್ಲಿರುವ ನಾವೂ, ಸರ್ವ ಸಮಾನತೆಯ ಮಾತನಾಡುತ್ತಿರುವ ನಾವೂ

ಮಾಡಲಾಗಿಲ್ಲ ಕಾರಣ ಏನು ? ಹೃದಯವಂತಿಕೆ ಇಲ್ಲದಾಗಿರುವುದು. ರಾಜಕಾರಣಿಗಳಿಗೆ ಹರಿಜನರ, ಹಿಂದುಳಿದವರ, ಅಲ್ಪ ಸಂಖ್ಯಾತರ, 'ಓಟು' ಬೇಕು. ಅದಕ್ಕಾಗಿ ಆಕರ್ಷಕವಾದ ಮಾತುಗಳಲ್ಲಿ ಘೋಷಣೆ ನಡೆದಿದೆಯೇ ವಿನಾ, ಅಂತಃಕರಣ ಕರಗಿ, ಅಸ್ಪೃಶ್ಯರೂ ಉದ್ಧಾರವಾಗಬೇಕು, ಮನುಷ್ಯರೆನ್ನಿಸಿಕೊಳ್ಳಬೇಕು ಎಂಬ ಸದ್ಭಾವನೆ ಕಾಣುತ್ತಿಲ್ಲ. ಇದು ತುಂಬ ವಿಷಾದನೀಯ ಬಸವಣ್ಣನವರು ತಮ್ಮ ಜೀವಿತದ ಉದ್ದಕ್ಕೂ (ಬಾಳಿದ್ದು 36 ವರ್ಷ) ತುಳಿತಕ್ಕೊಳಗಾದವರೊಂದಿಗೇ ಖಾಸಗೀ ಹಾಗೂ ಸಾರ್ವಜನಿಕವಾಗಿ ಬಾಳಿದರು. ಅವರಿಗೆ ಆಪ್ತ ಸಹಾಯಕನಾಗಿದ್ದವನು ಹಡಪದ ಅಪ್ಪಣ್ಣ, ಆತನ ಮಹಾಮನೆಯಲ್ಲಿ ಕಿನ್ನರಿಯ ಬ್ರಹ್ಮಯ್ಯನಿದ್ದ, ಅನುಭವ ಮಂಟಪದಲ್ಲಿ ಹರಳಯ್ಯನಿದ್ದ, ಮಂತ್ರಿಯಾಗಿ ಕಂಬಳಿ ನಾಗಿದೇವನೊಂದಿಗೆ ಊಟ ಮಾಡಿದ್ದರು. ನಮಗಿಂದು ಆ ಮಹಾನುಭಾವನ ಆದರ್ಶವೇ ಮಾರ್ಗದರ್ಶನ. ಅಲ್ಲದೆ ಕಾಯಕ ಕಲಿಸಿದರು, ದಾಸೋಹ ನಡೆಸಿದರು ಸಾರ್ವಕಾಲಿಕ ಮೌಲ್ಯಗಳನ್ನಾಗಿಸಿ ಬಾಳಿದರು– ಇಂದಿನ ನಮ್ಮ ಸಮಸ್ಯೆಗಳಿಗೆ ಬಸವಣ್ಣನವರ ಮಾರ್ಗವೊಂದೇ ಸಮರ್ಪಕ ಪರಿಹಾರ ಎಂದು ನುಡಿದರು.

ಬಸವಣ್ಣನವರ ನಾಟಕ ಪ್ರದರ್ಶನ ಅಪಾರ ಜನಸಮುದಾಯ. ತುಂಬು ಮೆಚ್ಚುಗೆ ಪ್ರೇಕ್ಷಕರಿಂದ. ಸಂಗೀತ ಮಾಸ್ಟರ್ ಬಗ್ಗೆ ಅಭಿಮಾನದ ಮಾತುಗಳು. ಶಾಸಕ ಶ್ರೀ ಲಕ್ಷ್ಮೀನರಸಿಂಹಯ್ಯನವರ ಉಪಸ್ಥಿತಿ, ಕಣ್ಣುಮುಚ್ಚದೆ ನಾಟಕ ನೋಡಿದ ಹೆಮ್ಮೆ ಅವರದು. "ಅಕ್ಕ ಮಹಾದೇವಿಯ ಪಾತ್ರ ತುಂಬಾ ಸೊಗಸಾಗಿತ್ತು" ಒಬ್ಬರ ಅಂಬೋಣ. "ಯಾಕೆ ನೀಲಾಂಬಿಕೆ ಗಂಗಾಂಬಿಕೆಯರು ಎಷ್ಟು ಸುಂದರವಾಗಿ ಮಾಡಿದರು"–ಮತ್ತೊಬ್ಬರ ಮೆಚ್ಚುಗೆ. ಅಂತೂ ಬ್ಯಾಡಗೆರೆ ಎಲೆ ತೋಟದಲ್ಲೆಲ್ಲಾ ವಚನಗಳ ಪ್ರತಿಧ್ವನಿ ಇಡೀ ರಾತ್ರಿ. ನಾಟಕ ಮುಗಿದಾಗ ಸೂರ್ಯ ಕಿರಣಗಳು ತೂರಿಬರುತ್ತಿದ್ದವು ಅಡಿಕೆ ತೋಟಗಳ ಮಧ್ಯೆ.

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ